# ಮಂದಾಕಿನಿ

ಫೆಬ್ರುವರಿ ೧೯೭೦



ಸಂಪುಟ ೧ * * * * * ಸಂಚಿಕೆ ೫

ವಾರ್ಷಿಕ ಚಂದಾ ಬಿಡಿ ಸಂಚಿಕೆ

ಐದು ರೂಪಾಯಿ ಶಹಪುರ. ಐವತ್ತು ಪೈಸೆ

# ಒಳಪುಟಗಳಲ್ಲಿ



ವಿಷಯ ಲೇಖಕರು



...............

**ಸಂಪಾದಕರು**

ವಿದ್ವಾನ್ ಜಿ. ಎಂ. ಗುರುಸಿದ್ಧಶಾಸ್ತ್ರೀ
ಕಾವ್ಯತೀರ್ಥ

**ಗೌರವ ಸಂಪಾದಕರು**

ಶ್ರೀ ಸಗರ ಕೃಷ್ಣಾಚಾರ್ಯ
ಎಂ. ಎ., ಬಿ.ಇಡಿ.

**ಸಲಹೆಗಾರರು**

ಶ್ರೀ ಸಿದ್ಧಯ್ಯ ಪುರಾಣಿಕ
ಬಿ. ಎ., ಎಲ್ ಎಲ್. ಬಿ.

ಶ್ರೀ ರಾಘವೇಂದ್ರ ಇಟಗಿ ಎಂ. ಎ.

ಶ್ರೀ ನಾಗಪ್ಪ ಶೆಟ್ಟರ ಶಹಪುರ

**ಪ್ರಕಾಶಕರು**

ಶ್ರೀ ಜಿ. ಎಂ. ಗುರುಬಸವಾರ್ಯ
ಶ್ರೀ ಬಸವರಾಜ ಮುದ್ರಣಾಲಯ
ತಾ. ಶಹಪುರ. ಜಿ. ಕಲಬುರ್ಗಿ.

---

**ಲೇಖಕರಲ್ಲಿ ಸವಿನಯ ಅರಿಕೆ**

ಒಳ್ಳೆಯ ಬರಹಗಾರರು ತಮ್ಮ ಲೇಖನ ಕತೆ, ಕವನ, ನಾಟಕ, ಪ್ರಬಂಧ, ಹರಟೆ ಮುಂತಾದುದನ್ನು ಕಾಗದದ ಒಂದೇ ಕಡೆಗೆ ಸ್ಫುಟವೂ ಶುದ್ಧವೂ ಆದ ಅಕ್ಷರಗಳಲ್ಲಿ ಬರೆದು ಕಳಿಸಬೇಕು. ಸ್ವೀಕೃತವಾದವುಗಳನ್ನು ಯಥಾವಕಾಶ ಪ್ರಕಟಿಸಲಾಗುವುದು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲು ಅಂಚೆ ಚೀಟಿಟು ಇರಿಸುವುದು ಅಗತ್ಯ.

ಧಾರಾವಾಹಿಯಾಗಿ ಕಾದಂಬರಿಯನ್ನು ಪ್ರಕಟಿಸಲು ಇಚ್ಛಿಸುವವರು ಕಾದಂಬರಿಯ ಪೂರ್ತಿ ಪ್ರತಿಯನ್ನು ಕಳಿಸಬೇಕು. ಸಲಹೆಗಾರರಿಂದ ಅದು ಮನ್ನಣೆ ಪಡೆದರೆ ಮಾತ್ರ ಅದನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

ವ್ಯಕ್ತಿಚಿತ್ರ ಜೀವನ ಚಿತ್ರ ಚುಟುಕ ಮುಂತಾದವುಗಳಿಗೂ ಪತ್ರಿಕೆಯಲ್ಲಿ ಸ್ಥಾನವಿದೆ. ಕರ್ನಾಟಕದ ಪ್ರತಿಯೊಂದು ಭಾಗದವರೂ ಇದು ತಮ್ಮ ಪತ್ರಿಕೆಯೆಂದೇ ಭಾವಿಸಿ ಅವಶ್ಯ ತಮ್ಮ ಕೃತಿಗಳನ್ನು ಪ್ರಕಟನೆಗಾಗಿ ಕಳಿಸಬೇಕು. ಹೊರನಾಡ ಕನ್ನಡಿಗರೂ, ಪರದೇಶಗಳಲ್ಲಿದ್ದ ಕನ್ನಡಿಗರೂ ಸಹ ತಮ್ಮ ಸಾಹಿತ್ಯಿಕ ಕೃತಿಗಳೊಂದಿಗೆ ತಮ್ಮ ಅಲ್ಲಿನ ಜೀವನ, ಸಾಹಿತ್ಯ ರಂಗದಲ್ಲಿ ಸಾಧಿಸಿದ ಪ್ರಗತಿ, ಅಲ್ಲಿನ ತಮ್ಮ ಸಮಸ್ಯೆಗಳು ಮುಂತಾದುದನ್ನು ಕುರಿತೂ ಅತ್ಯುತ್ತಮ ಬರೆಹಗಳನ್ನು ಕಳಿಸಿದಲ್ಲಿ ಅವುಗಳನ್ನು ಸಂತೋಷದಿಂದ ಪ್ರಕಟಿಸಲಾಗುವುದು. ಲೇಖಕರು ಇದು ತಮ್ಮ ಪತ್ರಿಕೆಯೆಂದೇ ಭಾವಿಸಿ ಇದರ ಉತ್ಕರ್ಷಕ್ಕಾಗಿ ಸರ್ವವಿಧದಿಂದಲೂ ಪ್ರಯತ್ನಿಸಬೇಕು.

xxxx

ಜಾಹೀರಾತಿನ ಬಗ್ಗೆ ಪತ್ರ ವ್ಯವಹಾರ ಮಾಡುವವರೂ ಚಂದಾ ಹಣ ಮುಂತಾದುದನ್ನು ಕಳಿಸುವವರೂ ಪ್ರಕಾಶಕರ ವಿಳಾಸಕ್ಕೆ ಕಳಿಸಬೇಕು.

# ಎರಡು ಸಂಸ್ಮರಣ ಸಂಚಿಕೆಗಳು

—(●)—

ಹೈದರಾಬಾದ್ ಕರ್ನಾಟಕದ ಖ್ಯಾತ ಸಾಹಿತಿಗಳೂ, ಕವಿಗಳೂ, ಆಗಿದ್ದ ದಿವಂಗತ ಡಿ. ಕೆ. ಭೀಮಸೇನರಾಯರೂ, ಮಾನ್ವಿ ನರಸಿಂಗರಾಯರು ನಮ್ಮನ್ನಗಲಿ ಹೋದುದರ ನೆನಪಿಗಾಗಿ ನಾವು 'ಮಂದಾಕಿನಿ' ಪತ್ರಿಕೆಯ ಎರಡು ಸಂಸ್ಮರಣ ಸಂಚಿಕೆಗಳನ್ನು ಅವರ ಮೃತ್ಯು ತಿಥಿಯೊಳಗಾಗಿ ತೆಗೆಯುವ ವಿಚಾರ ಇಟ್ಟುಕೊಂಡಿದ್ದೇವೆ. ಅವರನ್ನು ಚೆನ್ನಾಗಿ ಬಲ್ಲ ಲೇಖಕರು, ಕವಿಗಳು ಅವರನ್ನು ಕುರಿತಾದ ಲೇಖನ, ಕವಿತೆ ಮುಂತಾದುದನ್ನು ಈ ಕೆಳಗಿನ ವಿಳಾಸಕ್ಕೆ ಇದೇ ಎಪ್ರಿಲ್ ತಿಂಗಳ ಅಂತ್ಯದೊಳಗಾಗಿ ಕಳಿಸುವ ಕೃಪೆದೋರಬೇಕು.

ಲೇಖನಗಳು ಅವರ ಜೀವನ, ಸಾಹಿತ್ಯಸೇವೆ, ವೃತ್ತಿ, ಸಾಮಾಜಿಕ ಕಾರ್ಯಗಳು ಮುಂತಾದುವನ್ನು ಪ್ರತಿಬಿಂಬಿಸುವಂತಿರಬೇಕು. ಅವರ ಭಾವ ಚಿತ್ರಗಳು ಯಾರಲ್ಲಾದರೂ ಇದ್ದರೂ ಅವಶ್ಯ ಕಳಿಸಬೇಕು. ಜಾಹೀರಾತುದಾರರು, ಅವರನ್ನು ಗೌರವ ಸೂಚಿಸುವಂತಹ ಜಾಹೀರಾತುಗಳನ್ನು ಕಳಿಸಿದರೂ ಸುಲಭದರದಲ್ಲಿ ಪ್ರಕಟಿಸಲಾಗುವುದು. ದಯೆಯಿಟ್ಟು ಎಲ್ಲರೂ ಸಹಕರಿಸಬೇಕು.

ತಮ್ಮ ವಿಶ್ವಾಸದ

ಸಗರ ಕಷ್ಣಾಚಾರ್ಯ (ಗೌರವ ಸಂಪಾದಕ)

'ಮಂದಾಕಿನಿ' ಕಾರ್ಯಾಲಯ ಹಳೆಯಪೇಟೆ ಶಹಪುರ, ಜಿಲ್ಲಾ ಗುಲಬರ್ಗಾ.

# ಮಂದಾಕಿನಿ

**ಮಾಸಪತ್ರಿಕೆ**




| ಸಂಪುಟ ೧ | ಫೆಬ್ರುವರಿ ೧೯೭೦ | ಸಂಚಿಕೆ ೫ |
|---|---|---|


## ಮಂದಾಕಿನಿ

ಶಹಪುರವೆಂಬ ಪ್ರಣತಿಯಲ್ಲಿ
ಹಿತಚಿಂತಕರಿಂದ ತೈಲವನೆರೆಯೆ
ಬರೆಹಗಾರರು ಬತ್ತಿಯನಿರಿಸೆ
ಸಂಪಾದಕವರ್ಗ ದೀಪವಮುಟ್ಟಿಸೆ
ಶೋಳಗಿ ಬೆಳಗುತಿದೆ ನೋಡಾ
ನಮ್ಮ 'ಮಂದಾಕಿನಿ'ಯ ಪ್ರಕಾಶ !

- ಡಿ. ಚೆನ್ನಬಸವ ಸಗರ

# ತರಂಗ

. . . . . . .

ತರಂಗ, ತರಂಗ, ತರಂಗ,
ಜಲದ ಮೇಲೆಲ್ಲ ನಿನ್ನ ಚದುರಂಗ
  ಮಾನಸ ಸರೋವರವೊ ?
  ಪ್ರಜ್ಞೆಯ ಚಕ್ರಗಳೊ ?

ಏಳು ಬೀಳುಗಳೆಲ್ಲ
ನಿನ್ನ ಜೀವನ ಮಂತ್ರ
  ಮುಂದೆ ಸಾಗುವುದೊಂದೆ,
  ನೀನು ಬಲ್ಲೆ !

ವಿಶ್ವವೆಲ್ಲವೂ ನಿನ್ನ
  ದೆಂಬ ಬಯಕೆ -
  ಪ್ರತಿಕ್ಷಣವು ನೀ
  ಸರ್ವ ದಿಕ್ಕಿನಲಿ ಸಾಗೆ,
  ದರ್ಶನ ಗಳೆಲ್ಲವೂ
  ನಿಲ್ಲುವವು ಬಾಗಿ

ಹೃದಯಾಂತರಾಳದಲಿ
  ನಿನ್ನ ಭೈರವಿ ನಾಟ್ಯ,
  ಜೀವನ ಪ್ರತೀಕ - ನೀಂ ,
  ಸಾಗಿಸು ವಿಶ್ವ ಚಕ್ರ

" ಸತ್ಯಾನಂದ "

# ಅಮಲಾಪುರದ ಹನುಮಪ್ಪ

## ದೇವಾಲಯ ನಿರ್ಮಾಣ

ಹೋತಪಟ್ಟಿ ಎಂಬ ಚಿಕ್ಕ ಗ್ರಾಮವು ಸಗರನಾಡಿನ ಸುರಪುರ ಸಂಸ್ಥಾನಕ್ಕೆ ಸೇರಿರುವದು. ಈ ಊರು, ಅಮಲಾಪುರದ ಪ್ರಾಣದೇವರ ದೇವಾಲಯದಿಂದ ೩. ಮೈಲು ಅಂತರದಲ್ಲಿರುವದು. ಅಲ್ಲಿಯ ಪುಷ್ಪದತ್ತನ ಮನೆಯಲ್ಲಿ ಸಂಗನಬಸ್ಸಪ್ಪನೆಂಬ ಮುಗ್ಧಭಾವದ ಸದ್ಭಕ್ತನೊಬ್ಬನಿದ್ದನು. ಅವನ ಭೂಮಿಯಲ್ಲಿಯೇ ಮಾರುತಿಯು ರಾಮಧ್ಯಾನದಲ್ಲಿ ಮಗ್ನನಾಗಿ ಸಮಾಧಿ ಸ್ಥಿತಿಯಲ್ಲಿ ಕುಳಿತಿದ್ದನು. ದಿನಚರ್ಯವಂತ, ಹೂಗಾರ ಸಂಗನಬಸ್ಸಪ್ಪನು ತಮ್ಮ ಗ್ರಾಮದ ಪ್ರಾಣದೇವರನ್ನು ಪೂಜಿಸಿ, ಪಾಥೇಯವನ್ನು ಕಟ್ಟಿಕೊಂಡು ಎತ್ತುಗಳನ್ನು ಹೊಡಕೊಂಡು ಬಂದು ಆ, ಭೂಮಿಯನ್ನು ಉಳುತ್ತಿದ್ದನು. ಒಂದುದಿನ ಭೂಮಿಯನ್ನು ಉಳುತ್ತಿರುವಾಗ ನೇಗಿಲಿಗೆ ಅಡ್ಡವಾಗಿ ಗುಂಡು ಬಂದಿತು. ಆ ಕಲ್ಲನ್ನು ಕಿತ್ತಿ ಹಾಕಬೇಕೆಂದು ಸಂಗನಬಸ್ಸಪ್ಪನು ಬಹಳ ಪ್ರಯತ್ನ ಪಟ್ಟನು. ಹಾರಿ ಗುದ್ದಲಿಗಳಿಂದ ಮೀಟಿದನು. ಆದರೆ ಆ ಶಿಲೆಯು ಅಲುಗಲಿಲ್ಲ. ಉಳುವ ಕೆಲಸವನ್ನು ಅರ್ಧಕ್ಕೆ ನಿಲ್ಲಿಸಿ ಪುಷ್ಪದತ್ತನು ಎತ್ತುಗಳನ್ನು ಹೊಡಕೊಂಡು ಮರುಳಿ ಮನೆಗೆ ಬಂದನು. ಅಂದಿನ ರಾತ್ರಿ ಸಂಗನಬಸಪ್ಪನು ಮಲಗಿ ನಿದ್ರಿಸುತ್ತಿರುವಾಗ, ಆಂಜನೇಯ ಸ್ವಾಮಿ ಸ್ವಪ್ನದಲ್ಲಿ ಬಂದು ದರ್ಶನಕೊಟ್ಟನು. “ ಭಕ್ತಾ ! ನಿನ್ನ ಮುಗ್ಧ ಭಕ್ತಿ ಭಾವನೆಗಳಿಗೆ ನಾನು ಮೆಚ್ಚಿದ್ದೇನೆ. ನಿತ್ಯದಲ್ಲಿ ನೀನು ಮಾಡುತ್ತಿರುವ ಸೇವೆಗೆ ಸಂತುಷ್ಟನಾಗಿದ್ದೇನೆ. ನಿನ್ನ ಕಡೆಯಿಂದ ಸೇವೆ ತೆಗೆದುಕೊಳ್ಳಬೇಕೆಂಬ ಆಪೇಕ್ಷೆಯಿಂದ ನಾನು ‘ನಿನ್ನ ಹೊಲದಲ್ಲಿ ವಾಸಮಾಡಿದ್ದೇನೆ. ಇಂದು ನೀನು ಉಳುತ್ತಿರುವ ನೇಗಿಲಿಯನ್ನು ನಿರ್ಬಂಧಿಸಿದವನು ನಾನು ! ಆ ಗುಂಡಿನಲ್ಲಿ ನಿನಗೆ ದರ್ಶನ ಕೊಡುತ್ತೇನೆ; ಅಲ್ಲಿ ನನ್ನ ವಾಸಕ್ಕಾಗಿ ನಿಲಯವನ್ನು ನಿರ್ಮಿಸು. ಗುಡಿಕಟ್ಟುವ ಕೆಲಸದಲ್ಲಿ ನಿನ್ನ ಬೆಂಗಾವಲಿಗೆ ಇದ್ದು ಸಹಾಯಮಾಡುವೆನು. ‘ಬೆದರದಿರು, ಬೆಚ್ಚದಿರು, ಧೃತಿಗೆಟ್ಟು ಮರುಗದಿರು. ಚೈತ್ರದ ಚಿತ್ರಾ ಪೌರ್ಣಿಮಾ ಶುಭಲಗ್ನದಲ್ಲಿ ಕಟ್ಟಡದ ಕಾರ್ಯವನ್ನು ಆರಂಭಿಸು” ಎಂದಂತಾಗಿ ಸ್ವಪ್ನ ಸೃಷ್ಟಿ ಮಾಯವಾಯಿತು. ನಿದ್ರೆಯು ದೂರಾಯಿತು. ನಿಶೆ ಹರಿಯಿತು. ಉಷೆಯು ಆಗಮಿಸಿದಳು. ಉಷಃಕಾಲದ ಅರುಣ ಕಿರಣದೊಡನೆ ಪುಷ್ಪದತ್ತನು ಮಿಂದುಮಡಿಯಾಗಿ ಪೂಜಾ ಸಲಕರಣದೊಡನೆ ಆ ಸ್ಥಾನಕ್ಕೆ ಬಂದನು. ಶಿಲೆಯಲ್ಲಿ ಆವಿರ್ಭವಿಸಿದ ಮೂರ್ತಿಗೆ ಅಭಿಷೇಕ ಪೂಜೆಗಳನ್ನು ಭಕ್ತಿಯಿಂದ ಸಲ್ಲಿಸಿದನು. ಸೇವೆಯಲ್ಲಿ ತಲ್ಲೀನನಾದನು; ತನ್ಮಯನಾದನು. ಆತ್ಮ ಪರವಶತೆಯಲ್ಲಿಯೇ ಗುಡಿಯಕಾರ್ಯವನ್ನು ಮಾಡತೊಡಗಿದನು. ಕಲ್ಲು, ಗುಂಡುಗಳನ್ನು ತಂದು ಕಟ್ಟಡವನ್ನು ಪ್ರಾರಂಭ ಮಾಡಿದನು. ೭ ವರ್ಷಗಳಿಗೆ ನೀಗದ ಸಾಗದ ಪೆರ್ಬಂಡೆಗಳನ್ನು ಅಗೆದು

ತಂದು ನಿರಾಯಾಸವಾಗಿ ಕಟ್ಟುತ್ತಿದ್ದನು. ಕೆಲವು ದಿವಸಗಳಲ್ಲಿ ಈಗಿದ್ದ ಗರ್ಭಗುಡಿಯು ಸಿದ್ಧವಾಯಿತು, ಪರಮಾತ್ಮನ ಪರಮಾನುಗ್ರಹವಾದಮೇಲೆ, ಸೂಜಿಯಿಂದ ಬೆಟ್ಟವನ್ನು ಭೇದಿಸಬಹುದು. ಅಂತೇ ಬಲಭೀಮನ ಸಹಾಯದಿಂದ ಪುಷ್ಪದತ್ತನು, ದೇವಮಂದಿರವನ್ನು ಕಟ್ಟಿದನು. "ಹನುಮ ಭೀಮರ ಸದನ ರಂಜಿಸಿತು ಹರಿಕೃಪಾ ಬಲದಿ" ಶ್ರೀವಾಯುದೇವರ ಅನುಗ್ರಹದಿಂದ ನಿರ್ಮಿತವಾದ ಈ ಮಂದಿರವು ಭಕ್ತರಿಗೆ ಮುಕ್ತಿಮಂದಿರವಾಯಿತು ಸಂಗನಬಸಪ್ಪನ ವಾಣಿಯು ವಾಯುದೇವರ ವಾಣಿಯಾಯಿತು. ಭಕ್ತರಿಗೆಕೊಟ್ಟ ವಚನಗಳು ಅನುಭವಕ್ಕೆ ಬರತೊಡಗಿದವು. ಭಕ್ತರ ಸಂಖ್ಯೆ ಹೆಚ್ಚಾಯಿತು. ಹರಕೆಹೊತ್ತ ಜನಸ್ತೋಮವು ಉತ್ಸವಾದಿಗಳನ್ನು ಪ್ರಾರಂಭಮಾಡಿದರು. ದಕ್ಷಿಣಾಯನದಲ್ಲಿ ಯೋಗನಿದ್ರೆಯಲ್ಲಿದ್ದ ಪರಮಾತ್ಮನು ಉತ್ತರಾಯಣ ಪರ್ವದಲ್ಲಿ ಜಾಗ್ರತನಾಗುವನು. ರವಿಯು ಮಕರಕ್ಕೆ ಬಂದದಿನವೇ ಉತ್ತರಾಯಣ ಕಾಲ ಅಂದು ವೈಕುಂಠದ ಹೆಬ್ಬಾಗಿಲು ತೆರೆಯಲ್ಪಡುವದು.

ಈ ಪುಣ್ಯತಮ ಕಾಲದಲ್ಲಿ ತನ್ನ ಸ್ವಾಮಿಯ ದರ್ಶನವಾಗಬೇಕೆಂಬ ಇಚ್ಛೆಯು ಆಂಜನೇಯನಿಗೆ ಆಯಿತು "ಸದ್ಭಕ್ತರಾದವರು ಶುಚಿರ್ಭೂತರಾಗಿ ತನ್ನ ದೇವರನ್ನು ಸಂದರ್ಶಿಸಬೇಕು" ಈ ಸಂದೇಶವನ್ನೇ ಬಲಭೀಮನು ಸಂಗನಬಸಪ್ಪನಿಗೆ ಸ್ವಪ್ನದಲ್ಲಿ ಸೂಚಿಸಿದ್ದನು. ಮಕರ ಸಂಕ್ರಮಣ ಪರ್ವಕಾಲದಲ್ಲಿ ಅನುಲಾಪೂರದ ಹನುಮನು ಭಕ್ತರ ಸಮೂಹದೊಡನೆ, ಛತ್ರಚಾಮರ ಧ್ವಜಪತಾಕೆಗಳ ಸಂಘಟನೆಗಳಿಂದ, ವಿವಿಧ ವಾದ್ಯಗಳ ಘೋಷಗಳರವದಿಂದ, ಭೇರಿ ನಗಾರಿ ಕೊಂಬು ಕಹಳೆಗಳ ಜಯಘೋಷದೊಡನೆ ಪುರಮುಟ್ಟಿ ದಕ್ಷಿಣ ಕಾಶಿ ಎನಿಸಿದ ಪನ್ನತಿಯ ಮುಂದೆ ಹರಿಯುವ ಭೀಮಾ ತಟಾಕಕ್ಕೆ ಬರುವನು. ಉತ್ತರಾಯಣದ ಪುಣ್ಯತಮಕಾಲದಲ್ಲಿ ದೇವಗಂಗೆಯಲ್ಲಿ ಮಿಂದು ಮಾರುತಿಯು, ವೈಕುಂಠನೆನಿಸಿದ ಶೇಷಗಿರಿಗೆ ಅಭಿಮುಖವಾಗಿನಿಂತು ಶ್ರೀನಿವಾಸ ಮೂರ್ತಿಯನ್ನು ತನ್ನ ಹೃದಯ ಮಂದಿರದಲ್ಲಿ ಆಹ್ವಾನಿಸಿ ಆವಿರ್ಭವಿಸಿದ ಮೂರ್ತಿಗೆ ಪ್ರಣಾಮವಂ ಮಾಡಿದನು ಸಂಗನಬಸಪ್ಪನು ಪೂಜೆಯನ್ನು ಮುಗಿಸಿ ಆರತಿ ಎತ್ತಿ ಬೆಳಗಿ ನಮಸ್ಕರಿಸುವಾಗ ಆಂಜನೇಯನ ಮೂಲರೂಪ ಕಂಗಳ ಕಾಂತಿಯಲ್ಲಿ ಮಿಂಚಿ ಮಾಯವಾಯಿತು. ಪೂಜಾರಿ ಕಣ್ಣು ತೆರೆದನು. ಮುಂದೆ ಭಯಾನಕ ರೂಪವಡಗಿ ಸೌಮ್ಯಮೂರ್ತಿ ಅಂಗಣದಲ್ಲಿ ವಿರಾಜಿಸುತ್ತಿದ್ದಿತು. (ಅಂದು ಸಂಗನ ಬಸಪ್ಪ ಪೂಜಾರಿ ಹಾಕಿದ ಪರಿಪಾಠ ಇಂದೂ ಅನೇರೀತಿ ಪ್ರಗತಿ ಪಥದಲ್ಲಿ ಸಾಗಿದೆ) ಅಂದಿನಿಂದ ಇಂದಿನವರೆಗೂ ಆಂಜನೇಯ ಕನ್ನಾಡಿನ ಸರ್ವಮತೀಯರಿಗೆ ಆರಾಧ್ಯ ಮೂರ್ತಿಯಾಗಿ ನಿಂತಿದ್ದಾನೆ, ವರದ ಹಸ್ತವನ್ನೆತ್ತಿ ಶರಣಜನರಿಗೆ ಅಭಯವನ್ನು ನೀಡಿದ್ದಾನೆ. "ಹನುಮನನೆನೆದರೆ ಹಾರಿಹೋಗುವದು ಪಾಪ", ಎಂದು ದಾಸರು

ಹಾಡಿದರು. ಇದು ಅವರ ಅನುಭವದ ನುಡಿ. "ಭೀಮನ ನೆನೆದರೆ ಬಿಟ್ಟು ಹೋಗುವದು ಪೀಡಾ" ಎಂದೂ ನುಡಿದಿದ್ದಾರೆ ದಾಸರು. ಅವರ ಮಾತಿನಂತೆ ಭೂತ ಪ್ರೇತ ಪಿಶಾಚಿ ಪೀಡೆಗಳೂ ಬಿಟ್ಟು ಹೋಗುತ್ತಿರುವುದು ಅನುಭವಕ್ಕೆ ಬಂದ ಮಾತಾಗಿದೆ.

## — ರಂಗಮಂಟಪದ ನಿರ್ಮಾಣ —

ದಿಗ್ಗಿ ಗ್ರಾಮವು ಅಮಲಾಪುರಕ್ಕೆ ಮದಿರಾ ಹಳ್ಳಿಯಾಗಿರುವದು. ಆ ಗ್ರಾಮದ ಅಧಿಕಾರವು ಮುಸಲ್ಮಾನಗೌಡನಿಗೆ ಒಳಪಟ್ಟಿತ್ತು. ಅವನು ಸಂತಾನವಿಲ್ಲದೆ ಅಸಂತುಷ್ಟತೆಯಿಂದ ಸಂಸಾರವನ್ನು ಸಾಗಿಸುತ್ತಿದ್ದನು. ಎಂದಿನಂತೆ ಒಂದು ದಿನ ಆ ಗೌಡನು ತನ್ನ ಹೊಲಕ್ಕೆ ಬಂದನು. ಹೊಲವನ್ನು ತಿರುಗಾಡಿ ನೋಡಿ ಆನಂದ ತುಂದಿಲನಾಗಿ ಗುಡಿಸಲಿಗೆ ಹೋಗಿ ವಿಶ್ರಮಿಸಿದನು. ವಂಶವೃಕ್ಷದಕುಡಿಯು ಚಿಗುರದೆ ಬರಡು ಜೀವನ ವ್ಯರ್ಥವೆಂದು ಮನಸ್ಸು ನಿರಾಶೆಯ ನೀರಿನಲ್ಲಿ ಮುಳುಗಿತು. "ಶುಭ್ರ ಜೀಮೂತದೊಳಗೆ ಸುಳಿವ ಸೌದಾಮಿನಿಯಂತೆ, ನಿರಾಶೆಯ ಕಗ್ಗತ್ತಲೆಯಲ್ಲಿ ಆಶೆಯು ಮಿಂಚೊಂದು ಮಿಂಚಿ ಮಾಯವಾಯಿತು. ಬರಡು ಹೈನಾಗುವಕಾಲ ಬಂದಿತು. ಹೃದಯದಲಿ ಭಕ್ತಿ ಭಾವಗಳು ಮೂಡಿ ಬಂದವು. ಏಕಕಾಲದಲಿ. ಸಂಜೀವಮೂರ್ತಿಯ ಅಮೃತ ಸಿಂಚನದಿಂದ ಮಲಿನ ಹೃದಯವು ನಿರ್ಮಲವಾಯಿತು. ಭಾವಾವೇಶದ ಬುಗ್ಗೆ ಚಿಮ್ಮಿತು, ಪವನಾತ್ಮಜನಪಾದಪಂಕಜಗಳಿಗೆ ಮುಡಿಬಾಗಿ ಸೆರಗೊಡ್ಡಿ ಬೇಡಿಕೊಂಡನು. ಪತಿತನನ್ನು ಪಾವನಮಾಡೆಂದು ಪ್ರಾರ್ಥಿಸಿದನು. ಪುತ್ರಸಂತಾನವನ್ನು ದಯಪಾಲಿಸೆಂದು ಪವಮಾನ ಮೂರ್ತಿಗೆ ಪ್ರಣಾಮಗೈದನು. ಧ್ಯಾನದಲ್ಲಿ ತಲ್ಲೀನನಾದನು ತನ್ಮಯನಾದನು. "ಸಂಜೀವಮೂರ್ತಿಯ ಕಂಗಳ ಜ್ಯೋತಿಯ ಛವಿ ಚಮಕಿತು. ಯವನನ ಹೃದಯ ಮಂದಿರದಿ,, ಪ್ರಾಣದೇವರ ಅನುಗ್ರಹವಾಯಿತು. ಅಮಲಾಪುರದ ಹನುಮನ ವರಪ್ರಸಾದದಿಂದ ಗೌಡನ ಸತಿಯು: ಗರ್ಭಧಾರಿಣಿಯಾದಳು ನವಮಾಸ ತುಂಬಿತು. ಪುತ್ರರತ್ನನಂ ಪೆತ್ತಳು. ರತ್ನದ ಪ್ರಭೆಯಿಂದ ಮನೆ ಬೆಳಗಿತು. ಬೆಳಕಿನ ಹೊಳೆ ಹರಿಯಿತು. ಹರಿವಾಯುದೇವರ ಪ್ರೀತ್ಯರ್ಥವಾಗಿ ಹರಿಕೆಯು ಸಲ್ಲಿಸಬೇಕಾಯಿತು. ತನ್ನ ವಂಶದ ಕುಡಿಯನ್ನು ಕೊನರಿಸಿದ ಸಂಜೀವಮೂರ್ತಿಗೆ ಗರ್ಭಗುಡಿಯ ಮುಂದೆ ಷೋಡಶ ಕಂಬಗಳಿಂದ ಯುಕ್ತವಾದ ರಂಗಮಂಟಪವನ್ನು ಕಟ್ಟಿಸಿ ಮೇಲಿನ ಗೋಪುರವನ್ನು ಮಿನಾರಿನಂತೆ ಸುತ್ತಲೂ ಕಟ್ಟಿಸಿ, ಮಸೀದಿಯ ಆಕಾರವಾಗಿಟ್ಟು ತನ್ನ ಹೆಸರನ್ನು ಅದರಲ್ಲಿ ಅಡಗಿಸಿದನು. ಹಸಿರು ನಿಶಾನೆಯನ್ನು ಏರಿಸಿ ಹೆಸರನ್ನು ಸಾರ್ಥಕಮಾಡಿಕೊಂಡನು.

**"ವಿವಿಧ ಚಿತ್ರಗಳಿಂದ ಶಿಲೆಯು ಮಂಟಪ ಕಂಗೊಳಿಸುವುದು ದೇವನೆದುರಿನಲಿ"**

## 卐 ಮ ಹಾ ದ್ವಾ ರ 卐

"ಭಾವಭಕುತಿಯಲಿಂದ ಸುರಪುರದ ಅರಸು ಮಹಾದ್ವಾರ ನಿರ್ಮಿಸಿದ" "ರಾಮದೂತನ ಆಲಯದ ಹೆಬ್ಬಾಗಿಲು ನಿರ್ಮಿತವಾಯ್ತು ಶಿಲ್ಪಸುತ್ರದಲಿ" ರಾಜಾಜ್ಞೆಯ ಮೇರಿಗೆ ಶಿಲ್ಪ ಶಾಸ್ತ್ರಜ್ಞರು ಶಿಲೆಯನ್ನು ಕೆತ್ತಿ ಭವ್ಯ ಆಕಾರದ ಬಾಗಿಲವನ್ನು, ಅಕ್ಕಪಕ್ಕಗಳಲ್ಲಿ ವಾದ್ಯದ ಚಾವಡಿಗಳನ್ನು ಸುಭದ್ರವಾಗಿ ಕಟ್ಟಿದರು. "ನಿತ್ಯ ನಡೆಯುವ ಪೂಜೆಯ ವೇಳೆಗೆ ವಿವಿಧ ವಾದ್ಯಗಳು ಅಲ್ಲಿ ಮೊಳಗುವವು ,, " ಸುತ್ತಲಿನ ಶಿಲಾಮಂಟಪಗಳನ್ನು ಹರಕೆಹೊತ್ತ ಭಕ್ತಾದಿಗಳು ಕಟ್ಟಿಸಿರುವರು.ಈರೀತಿ ಗುಡಿಯು ಸಜ್ಜಾಗಿದೆ. ಭಕ್ತರಿಗೆ ಮುಕ್ತಿ ಮಂದಿರವಾಗಿದೆ. ಇಂದಿರಾಪತಿಯ ಅನುಗ್ರಹದಿಂದ ಪವನಾತ್ಮಜನ ಚರಿತ್ರೆ ಬೆಳಗಿದೆ.

"ಪರಿಪಾಲಿಸೆನ್ನಂ ಶ್ರೀರಾಮದೂತಂ ಶಿರಸಾನಮಾಮಿ"

ಶುಭಮಸ್ತು ! ಮಂಗಳಮಸ್ತು !!

# ವಿಚಾರ ದೀಪ್ತಿ

## ಶ್ರೀ ಸಿದ್ಧಯ್ಯ ಪುರಾಣಿಕ

ಬಾಹ್ಯಾಕರ್ಷಣೆಯ ಬಲೆಯಲ್ಲಿ ಬೀಳಬಾರದು. ನಿಜ. ಆದರೆ ಇದು ಸುಲಭ ಸಾಧ್ಯವೆ? ಪಂಚೇಂದ್ರಿಯಗಳ ಸಂಚು ನಮ್ಮನ್ನು ಈ ಬಲೆಯಲ್ಲಿ ಬೀಳಿಸುವುದೇ ಆಗಿದೆ. ಇವುಗಳಲ್ಲಿ ಒಂದೊಂದಕ್ಕೆ ಅಧೀನವಾದ ಪ್ರಾಣಿಗಳೂ ದುರ್ಗತಿಗೆ ಈಡಾಗಿವೆ.

“ ಕರಿಯು ಸ್ಪರ್ಶನೇಂದ್ರಿಯದಿಂದ ಬಂಧನವಡೆದಳಿಯಿತ್ತು : ಪತಂಗನು ರೂಪೇಂದ್ರಿಯದಿಂದ ಬಂಧನವಡೆದಳಿಯಿತ್ತು : ಭೃಂಗನು ಗಂಧೇಂದ್ರಿಯದಿಂದ ಬಂಧನವಡೆದಳಿಯಿತ್ತು; ಕುರಂಗನು ಶಬ್ದೇಂದ್ರಿಯದಿಂದ ಬಂಧನವಡೆದಳಿಯಿತ್ತು; ಮತ್ಸ್ಯವು ರಸನೇಂದ್ರಿಯದಿಂದ ಬಂಡನವಡೆದಳಿಯಿತ್ತು! ಇಂತೀ ಒಂದೊಂದು ಇಂದ್ರಿಯೋದ್ರೇಕದಿಂದ ಒಂದೊಂದು ಪ್ರಾಣಿಯು ಪ್ರಳಯವಾಯಿತ್ತು; ಪಂಚೇಂದ್ರಿಯಂಗಳ ಒಂದು ಘಟದಲ್ಲಿ ತಾಳಿಹ ಮನುಷ್ಯ ಪ್ರಾಣಿಗಳಿಗೆ ಮರವೆ ಎಡೆಗೊಂಡು, ದೇಹಮೋಹ ಭ್ರಾಂತು ಮುಸುಕಿ, ಮಾಯೆಯ ಬಾಯ ತುತ್ತಹುದು ಚೋದ್ಯವೇನು ಹೇಳಾ ಗುಹೇಶ್ವರಾ ?

ಪಂಚೇಂದ್ರಿಯಗಳ ಉದ್ರೇಕದಿಂದ ಮಾಯೆಯ ಬಾಯ ತುತ್ತಹುದು ಏನೂ ಚೋದ್ಯವಲ್ಲ ಆಗದಿದ್ದರೇ ಚೋದ್ಯ. ಪಂಚೇಂದ್ರಿಯಗಳೆಲ್ಲ ಏಕಕಾಲಕ್ಕೆ ಉದ್ರೇಕಗೊಳ್ಳುವ ಅಗತ್ಯವು ಇಲ್ಲ. ಯಾವುದೊಂದು ಉದ್ರೇಕಗೊಂಡರೂ ಸಾಕು. ಅಕ್ಕಮಹಾದೇವಿ ಎಚ್ಚರಿಸಿಯೇ ಇದ್ದಾಳೆ : “ಪಂಚೇಂದ್ರಿಯದ ಗುಣದೊಳಗೆ ಒಂದಕ್ಕೆ ಪ್ರಿಯವಾದರೆ ಸಾಲದೆ? ಸಪ್ತವ್ಯಸನದೊಳಗೆ ಒಂದಕ್ಕೆ ಪ್ರಿಯವಾದೊಡೆ ಸಾಲದೆ ? ಎಂದು.

ಐದು ಇಂದ್ರಿಯಗಳೊಳಗೆ ಒಂದಕ್ಕೆ ಪ್ರಿಯವಾದೊಡೆ ಸಾಲದೆ ? ಸಾಲದೇಕೆ? ಒಂದೊಂದು ತನ್ನದೇ ಆದ ಪ್ರಬಲತೆಯನ್ನು ಪಡೆದಿದೆ. ‘ಇಂದ್ರಿಯಗಳಲ್ಲಿ ಅಧಮ, ಅಧಿಕವೆಂಬುದುಂಟೇ ? ” ಎಂದು ಹರಿಶ್ಚಂದ್ರ ಕಾವ್ಯದ ಹೊಲತಿಯರು ಕೇಳಿಯೇ ಇದ್ದಾರೆ.

ಆದುದರಿಂದ ಯಾವ ಇಂದ್ರಿಯದ ಉದ್ರೇಕವನ್ನೂ ಉಪೇಕ್ಷಿಸುವಂತಿಲ್ಲ; ಯಾವುದಕ್ಕೂ ಅಧೀನವಾಗುವಂತಿಲ್ಲ. ಇಂದ್ರಿಯಗಳಿಗೆ ಅಧೀನತೆಯಲ್ಲ, ಇಂದ್ರಿಗಳ ಸ್ವಾಧೀನತೆಯೇ ತರಣೋಪಾಯ. ದಮನವಲ್ಲ, ಶಮನ ಉಪಾಯ. ಇಂದ್ರಿಯ ದಮನ

ಒಂದು ಸಮಸ್ಯೆಯನ್ನು ಪರಿಹರಿಸಿ ಇನ್ನೊಂದನ್ನು ಹುಟ್ಟಿಸುವ ಉಪಾಯ. "ಇಂದ್ರಿಯನಿಗ್ರಹ ಮಾಡಿದರೆ ಹೊಂದುವುವು ದೋಷಂಗಳು; ಮುಂದೆ ಬಂದು ಕಾಡುವವು ಪಂಚೇಂದ್ರಿಯಂಗಳು" ಎಂದು ಎಚ್ಚರಿಸಿದರು ಬಸವಣ್ಣನವರು; "ಇಂದ್ರಿಯ ನಿಗ್ರಹಮಾಡಿ ವಿಷಯಂಗಳ ಬಂಧಿಸಿ ಆತ್ಮಗೆ ಬಂಧವ ಮಾಡಿದರೆ ಆತ್ಮದ್ರೋಹ ಕಾಣರೋ" ಎಂದು ಎಚ್ಚರಿಸಿದರು ತೋಂಟದ ಸಿದ್ಧಲಿಂಗೇಶ್ವರರು.

ಹಾದಿ ಯಾವುದು ಹಾಗಾದರೆ? ಇಂದ್ರಿಯಗಳಿಗೆ ನಮ್ಮನ್ನು ಮಾರಿಕೊಳ್ಳುವುದಂತೂ ಸುತರಾಂ ಸತ್ಪಥವಾಗಲಾರದು. ಸೂಫೀ ಶ್ರೇಷ್ಠ ಕವಿಶ್ರೇಷ್ಠ ಜಲಾಲುದ್ದೀನ ರೂಮಿಯವರು ಕೇಳಿಲ್ಲವೆ?

ಎ ಗುಲಾಮತೆ ಅಕ್ಲೊ ತದಬೀರಾತೊ ಹೋಷ
ತೂ ಚರಾಯಿ ಖೇಷರಾ ಅರಜಾಂ ಫರೋಷೆ?—ಬುದ್ಧಿ, ಉಪಾಯ, ಜ್ಞಾನ—
ಇವೆಲ್ಲ ನಿನ್ನಲ್ಲಿವೆ. ನೀನೇಕೆ ನಿನ್ನನ್ನು ಅಗ್ಗದ ಬೆಲೆಗೆ ಮಾರಿಕೊಳ್ಳುವೆ? ಎಂದು

ನಮ್ಮನ್ನು ಅಗ್ಗದ ಬೆಲೆಗೆ ಮಾರಿಕೊಳ್ಳದಿರೋಣ. ನಮ್ಮ ನಿಜವಾದ ಬೆಲೆಯನ್ನು ಅರಿತುಕೊಳ್ಳೋಣ. ಪುರಂದರೋಕ್ತಿಯನ್ನು ಮರೆಯದಿರೋಣ—"ಮಾನವ ಜನ್ಮವು ದೊಡ್ಡದು, ಇದನ್ನು ಹಾನಿಮಾಡಿಕೊಳ್ಳಬೇಡಿ ಹುಚ್ಚಪ್ಪಗಳಿರ!

ಪಂಚೇಂದ್ರಿಯಗಳ ಚಾಪಲ್ಯವನ್ನು ಅವುಗಳ ಉದಾತ್ತೀಕರಣದಿಂದ ಅಂಕೆಯಲ್ಲಿರಿಸಿ ಕೊಳ್ಳಲಾಗದೆ?

**"ರಸವನರಿವುದಕ್ಕೆ ಜಿಹ್ವೆಯಾಗಿ ಬಂದು, ಗಂಧವನರಿವುದಕ್ಕೆ ನಾಸಿಕವಾಗಿ ಬಂದು, ರೂಪವನರಿವುದಕ್ಕೆ ನೇತ್ರವಾಗಿ ಬಂದು, ಶಬ್ದವನರಿವುದಕ್ಕೆ ಶ್ರೋತ್ರವಾಗಿ ಬಂದು, ಸ್ಪರ್ಶವನರಿವುದಕ್ಕೆ ತ್ವಕ್ಕಾಗಿ ಬಂದು — ಇಂತೆನ್ನ ಘಟದಲ್ಲಿ ನಿಂದು ಪಂಚವಕ್ತ್ರನಾದೆಯಲ್ಲಾ ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗವೇ!"**

ಶಿವಲೆಂಕ ಮಂಚಣ್ಣನವರ ಈ ವಚನ ನೆನಪಿನಲ್ಲಿದ್ದರೆ ಪಂಚೇಂದ್ರಿಯಗಳ ಕ್ರಿಯೆಗಳೆಲ್ಲ ಪರಮಾತ್ಮನ ಕ್ರಿಯೆಗಳಾಗಿ ಅವು ಬಾಧಕವಾಗದೆ ಸಾಧಕವಾಗುವುವು. ಇದು ಸಾಧನೆಗಳಲ್ಲಿ ಸಾಧನೆ, ಗುರಿಗಳಲ್ಲಿ ಗುರಿ!

★ ★ ★ ★ ★

# ತಾಯಿ-ಸತ್ವ

ತಾಯಿ ಸತ್ಯ
ಬೆಳೆವ ಬಾಳ ಬಳ್ಳಿಗೆ
ತಂದೆ ಶ್ರದ್ಧೆ
ನಂಬಿ ನಿಂತ ನಾಳೆಗೆ ||

ತಾಯಿ ಪ್ರೀತಿ
ಎದೆಯಹಾಲು ಒಡಲಿಗೆ
ತಂದೆ ನೀತಿ
ತೋಳುಬಲದ ರಕ್ಷೆಗೆ ||

ಮೀಸಲೊಲವು
ಹಾಡು ಹೃದಯ ಹಂಬಲ
ತಾಯಿ ಗುಟುಕು
ಎಲ್ಲ ಅವಳ ಎಂಜಲ ||

ತಾಯಿ ಮುಕ್ತಿ
ರಾಮರಕ್ಷೆ ಜೀವಕೆ
ತಾಯಿ ಚಿತ್ತ
ಶಿವನ ಮೆರೆವ ಸತ್ಯಕೆ ||

ಅಕ್ಷಿ ತಾಯಿ
ಪ್ರಾಣ ಶಕ್ತಿ ನೋಟಕೆ
ಸಾಕ್ಷಿ ತಂದೆ
ಅರಿವಿನಾಟ ನಾಟಕೆ |

ತಾಯಿ ರವಿಯು
ಹೃದಯ ಕಮಲವರಳಲು
ಕಿರಣ ಕಿರಣ
ಕೂಡಿಕೊಂಡು ತೊಳಗಲು ||

* * * * *

- ಇಟಗಿ ರಾಘವೇಂದ್ರ

# "ನಾನು ಸತ್ತು ಹೋದೆ!"

ನಾ. ಮು. ಗಂ —

**ಎಲ್ಲರೂ ಇಲ್ಲಿಂದ ಸತ್ತೇ ಹೋಗುತ್ತಾರೆ. ಪುನಃ ಬದುಕಿಬಂದಮೇಲೂ
ಸತ್ತವರಿಗಿಂತ ಕಡೆಯಾದರೆ ಏನು ಪ್ರಯೋಜನ? ಒಂದು ಜನ್ಮದ
ಸಂಸ್ಕಾರ ಇನ್ನೊಂದು ಜನ್ಮಕ್ಕೆ ದಾರಿದೀಪವಾಗಬೇಕೇ
ವಿನಹ ವಿಪರೀತ ವಾಗಬಾರದು! ಇಲ್ಲಿ ಸತ್ತು
ಹೋದದ್ದೂ ಒಂದು ವಿಶೇಷ.
ಅದರಿಂದ ಬುದ್ಧಿಗಲಿಕುದೂ ಒಂದು ವಿಶೇಷ!**

ಟಮ್ ಟಮ್ ಟಮ್ಮಾ, ಟಮ್! ಟಮ್ ಟಮ್ಮಾ ಟಮ್ ಟಮ್!! ತಮಟೆಯ ಶಬ್ದ ಕೇಳಿ ಬಂತು. ಅದು ನಿಲ್ಲುತ್ತಲೇ ಹಳ್ಳಿಯ ತಳವಾರ ಕೂಗು ಹಾಕಿದ.

ಇವೊತ್ತು ಚಂಜೆಗೆ ಏಕಾದ್ಸಿ ಪರ್ಯುಕ್ತ ಹರಿಕತೆ ಐತೆ. ಎಲ್ರೂ ಚಾವಡಿ ಕಟ್ಟೆಕಾಕ್ ಬರಬೇಕ್ರೂ ಪುನಃ ತಮಟೆಯ ಶಬ್ದ, ಕಿವಿಯ ತಮಟೆ ಹರಿದು ಹೋಗುವಂತೆ!

ಬೇಸಗೆ ರಜಾ ಬಂದಿತು. ನಾನೂ ನಮ್ಮ ಹಳ್ಳಿಗೆ ಹೋಗಿದ್ದೆ. ಹಳ್ಳಿಯ ಕಡೆ. ಹರಿಕತೆ ಹೇಗೆ ಮಾಡುತ್ತಾರೆ, ನೋಡಬೇಕು, ಕೇಳಬೇಕು ಅಂತ ಮನಸ್ಸು ಮಾಡಿದೆ. ಊಟಮಾಡಿ ಆರಾಮವಾಗಿ ಚಾವಡಿಯ ಕಡೆ ಹೊರಟೆ. "ಈ ಹಳ್ಳಿ ಜನಕ್ಕೆ ಹೊತ್ತು ಗೊತ್ತೂ ಏನೂ ಇಲ್ಲ. ರಾತ್ರಿಯೆಲ್ಲ ಕಥೆ ಹೇಳುತ್ತಾ ಇರುತ್ತಾರೆ. ಕೇಳೋರು ಕೇಳುತ್ತಾ ಇರುತ್ತಾರೆ. ತೂಕಡಿಸುವವರು ತೂಕಡಿಸುತ್ತಾ ಕುಳಿತಿರುತ್ತಾರೆ. ಎಂದು ಹಳ್ಳಿಗರನ್ನು ಹಿಯ್ಯಾಳಿಸುತ್ತಾ ಮೆಲ್ಲಗೆ ಹೆಜ್ಜೆ ಹಾಕಿದೆ.

ಹಳ್ಳಿ ಜನ ನಾನು ಅಂದುಕೊಂಡಷ್ಟು ಸೋಮಾರಿಗಳಾಗಿರಲಿಲ್ಲ. ಜನ ಶಿಸ್ತಾಗಿ ಕುಳಿತಿದ್ದರು. ಹರಿಕಥೆ ಆಗಲೇ ಪ್ರಾರಂಭವಾಗಿ ಬಿಟ್ಟಿತ್ತು. ಪ್ರಾರಂಭವ ಮಾತೇನು, ಆಗಲೇ ಮುಕ್ತಾಯದ ಘಟ್ಟಕ್ಕೆ ಬಂದಿತ್ತು.

ನಿಶಮ್ಯ ಮ್ರಿಯಮಾಣಸ್ಯ ಬ್ರುವತೋ ಹರಿಕೀರ್ತನಮ್ ।
ಯಮಪ್ರೇಷ್ಯಾನ್ ವಿಷ್ಣುದೂತಾ ವಾರಯಾಮಾಸುರೋಜಸಾ ॥

ಈ ರೀತಿಯಾಗಿ ವಿಷ್ಣುದೂತರು ಪ್ರತ್ಯಕ್ಷರಾಗಿ ಯಮದೂತರನ್ನು ದೂರಮಾಡಿದಂಥವರಾಗಿ ಅಜಾಮಿಳನನ್ನು ವೈಕುಂಠಕ್ಕೆ ಕರೆದುಕೊಂಡು ಹೋಗತಕ್ಕಂಥವರಾ

ದರು. ಶ್ರೀ ಮದ್ರಮಾರಮಣ ಗೋವಿಂದಾ-ಗೋವಿಂದ! ಹರನಮಃ ಪಾರ್ವತೀ ಪತಯೇ ಹರ ಹರ ಮಹಾದೇವ........ಬ್ರಾಹ್ಮಣ ವಂಶದಲ್ಲಿ ಹುಟ್ಟಿದವನಾದಾಗ್ಯೂ ಅಜಾಮಿಳನು ಜಾತಿಕರ್ಮವನ್ನು ಒಟ್ಟು, ಶೂದ್ರ ಸ್ತ್ರೀ ಸಂಪರ್ಕ ಮಾಡಿ, ತಿನ್ನಬಾರದನ್ನು ತಿಂದು ಮಾಡಬಾರದ್ದನ್ನು ಮಾಡಿ, ಎಲ್ಲರಿಂದಲೂ ಥೂ, ಛೀ, ಅನ್ನಿಸಿಕೊಂಡು ಬ್ರಾಹ್ಮಣ ಸಮಾಜದಿಂದಲೇ ಬಹಿಷ್ಕಾರ ಹೊಂದಿ ಕರ್ಮಭ್ರಷ್ಟನೂ ಧರ್ಮಭ್ರಷ್ಟನೂ ಆದ ಅಜಾಮಿಳನು ಸಾಯುವಂಥಾ ಸಮಯದಲ್ಲಿ ದೂರದಲ್ಲಿ ಆಟವಾಡುತ್ತಾ ನಿಂತಿದ್ದ ತನ್ನ ಮೋಹದ ಮಗನನ್ನು ಕೂಗುವಾಗ, ಹೇಗೋ 'ನಾರಾಯಣ' ಎಂದ ಮಾತ್ರಕ್ಕೆ ಹರಿಯು ಪ್ರಸನ್ನನಾಗಿ ಬಿಟ್ಟಿದ್ದಾನೆ! ಹೀಗೆನ್ನುವಂಥಾ ಸಂದರ್ಭದಲ್ಲಿ ಯಾವನೇ ಮಾನವನು ಭಕ್ತಿಪುರಸ್ಸರವಾಗಿ ಆ ದಯಾಮಯನಾದ ಭಗವಂತನ ನಾಮಸ್ಮರಣೆಯನ್ನು ಮಾಡುತ್ತಾನೆಯೇ ಅವನು ಖಂಡಿತವಾಗಿಯೂ ಮೋಕ್ಷ ಸಾಮ್ರಾಜ್ಯವನ್ನು ಪಡೆಯುವಂಥಾವನಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ'....

ದಾಸರು ತಮ್ಮ ಮಾತನ್ನು ಸಮರ್ಥಿಸುತ್ತಾ ಒಂದು ಹಾಡೂ ಹಾಡಿದರು' "ಕಲಿಯುಗದೊಳು ಹರಿನಾಮವ ನೆನೆದರೆ, ಕುಲಕೋಟಿಗಳುದ್ಧರಿಸುವವೋ' ರಂಗ!" ಎಂದು ಅವರ ಕಂಠಶ್ರೀ ಸುಶ್ರಾವ್ಯವಾಗಿತ್ತು. 'ಅಕ್ಕತಂಗಿಯರಿರಾ,ಅಣ್ಣ ತಮ್ಮಂದಿರಾ, ಹರಿನಾಮ ಸಂಕೀರ್ತನೆಗೆ ನಾಚಿಕೆ ಪಟ್ಟುಕೊಳ್ಳಬೇಡಿ' ಎಂದು ಎಲ್ಲರನ್ನೂ ಹುರಿದುಂಬಿಸಿ, ಶ್ರೀ ಮದ್ರಮಾರಮಣ ಗೋವಿಂದ ಎಂದು ಕೂಗಿ, ಎಲ್ಲರಿಂದಲೂ "ಗೋವಿಂದ" ಎಂದ. ಬಾಯಬಿಡಿಸಿದ ದಾಸರನ್ನು ಹೊಗಳುತ್ತಾ ನಾನು ಮನೆಗೆ ಹಿಂದಿರುಗಿದೆ.

ಮನೆಯ ಮಾರ್ಗ ದೂರದ್ದಲ್ಲವಾಗಿದ್ದರೂ ವಿಚಾರಸರಣಿ ಮಾತ್ರ ತುಂಬ ದೂರ ಸಾಗಿತು.

ಅಜಾಮಿಳ ಮಾಡಬಾರದ್ದನ್ನೆಲ್ಲ ಮಾಡಿದ. ಕೊನೆಗೆ ಸಾಯುವಾಗ ನಾರಾಯಣ' ಅಂದು ಬಿಟ್ಟ, ಮೋಕ್ಷ ಸಿಕ್ಕುಬಿಟ್ಟಿತು, ದಕ್ಕಿಯೂ ಬಿಟ್ಟಿತು! ಮೋಕ್ಷ ಇಷ್ಟು ಸುಲಭ ಸಾಧ್ಯವಾಗುವುದಾದರೆ, ಜನ್ಮ-ಜನ್ಮಾಂತರಗಳ ವೈಪರೀತ್ಯ ಏಕೆ?

"ಬಹೂನಾಂ ಜನ್ಮನಾಮಂತೇ, ಜ್ಞಾನವಾನ್ ಮಾಂ ಪ್ರಪದ್ಯತೇ" ಎಂದು ಶ್ರೀ ಕೃಷ್ಣಪರಮಾತ್ಮ ಭಗವದ್ಗೀತೆಯಲ್ಲಿ ಉಪದೇಶಿಸಿದುದು ಯಾರನ್ನುಕುರಿತು? "ಅಜಾಮಿಳ ನಾರಾಯಣ ಅಂದ ತಕ್ಷಣ, ವಿಷ್ಣುದೂತರು ಹಾಜರಾಗಿ ಯಮದೂತರ ಆರ್ಡರ್ ಅನ್ನು ಕ್ಯಾನ್ಸಲ್ ಮಾಡಿ ಬಿಟ್ಟರು! ಹಾಗಾದರೆ ಇದು ಸುಲಭೋಪಾಯವಾಯಿತು. **Way to Moksha Made Easy!**

ಕಾಳಿಗೆ ಜೊಳ್ಳು ಬೆರಸುವುದು ಅನ್ಯಾಯ ಇರಬಹುದು ಹಾಲಿಗೆ ನೀರು ಬೆರೆಸುವುದು ದ್ರೋಹ ಇರಬಹುದು. ಮುದ್ದೆಯಲ್ಲಿ ಮದ್ದು ಇಡುವುದು ಪಾಪ ಆಗಬಹುದು. ಹೆಂಡ ಕುಡಿದು, ಹೆಂಡತಿಯ ಪ್ರಾಣ ಹಿಂಡುವುದು ಪಶುತ್ವ ಎನಿಸಬಹುದು. ಆದರೂ' ಏನು ಮಾಡಿದರೂ ಎಲ್ಲಕ್ಕೂ ಒಂದೇ ಔಷಧಿ; ಒಂದೇ ರಾಮಬಾಣ ಅದೇ 'ನಾರಾಯಣ!' 'ನಾರಾಯಣ!!'

ಸಾಯುವುದಕ್ಕೆ ಸ್ವಲ್ಪಮುಂಚೆ—ಸಾಧಾರಣವಾಗಿ ಸಾಯುವುದಕ್ಕೆ ಮುಂಚೆ' ಆ ತಿಳಿವು ಬರುತ್ತದೆಯಂತೆ—'ನಾರಾಯಣ' ಅಂದು ಬಿಟ್ಟರಾಯಿತು.

ಒಳ್ಳೆಯ ಉಪಾಯ! ಹಾಗಾದರೆ ಈಗ ನ್ಯಾಯ-ಅನ್ಯಾಯಗಳ, ಧರ್ಮ-ಅಧರ್ಮಗಳ ಬಗ್ಗೆ ವಿಚಾರ ಮಾಡಬೇಕಾಗಿಲ್ಲ. ಎಂದು ನಿಶ್ಚಯಿಸಿದೆ ಸಾಲಮಾಡು, ಮಜಾಮಾಡು. ಸತ್ತಮೇಲೆ ಸಾಲ ಎಲ್ಲಿ ಉಳಿಯಿತು? ಎಂದು ಕೇಳಿದ ಚಾರ್ವಾಕನನ್ನು ಮೆಚ್ಚಿಕೊಂಡೆ. ಇರುವಷ್ಟು ದಿವಸ ಸ್ವಾರ್ಥಿಯಾಗಿ ಬಾಳುವುದರಲ್ಲಿ ತಪ್ಪಿಲ್ಲ ಎಂದು ನಿರ್ಧರಿಸಿ ಬಿಟ್ಟೆ.

ಇದೇ ವಿಚಾರ ಮೆಲುಕು ಹಾಕುತ್ತಾ, ಮುಸುಕು ಹಾಕಿದೆ.

× × ×

ಏಕೋ ಎದೆ ನೋವು ಕಾಣಿಸಿಕೊಂಡಿತು. ಕೆಮ್ಮಿದೆ; ತುಂಬಾ ಆಯಾಸವಾಯಿತು. ಮಗ, ನಾರಾಯಣನಿಗೆ ಹೇಳಿದೆ, ಡಾಕ್ಟರನ್ನು ಕರೆದುಕೊಂಡು ಬಂದ. ಡಾಕ್ಟರ್ ಕೈ-ನಾಡಿ ಹಿಡಿದು ಸಪ್ಪೆಮುಖ ಹಾಕಿಕೊಂಡರು. ನನ್ನ ಹೆಂಡತಿ ಮಕ್ಕಳನ್ನು ದೂರ ಕರೆದುಕೊಂಡು ಹೋಗಿ, 'ಇನ್ನು ನಿಮಿಷಗಳು. ಅಷ್ಟೆ.' ಅಂದರು. ಆದರೂ ಆ ಮಾತು ನನ್ನ ಕಿವಿಗೆ ಬಿತ್ತು.

ಇನ್ನು ಕೆಲವೇ ನಿಮಿಷಗಳಲ್ಲಿ ನನ್ನ ಸಾವು ನಿಶ್ಚಯ. ಇನ್ನು ಐದು ಆರು ನಿಮಿಷಕ್ಕೆ ಸಾಯಬಹುದು. ಅಬ್ಬಾ, ಆಗಲೇ ಒಂದು ನಿಮಿಷ ಆಯಿತು. ಸಾಯುವುದಕ್ಕೆ ಮುಂಚೆ ಏನು ಮಾಡಬೇಕು? ಹೆಂಡತಿಯನ್ನು ಕರೆದೆ. ಮಗನನ್ನು ನೋಡಿದೆ. ಇನ್ನೂ ಎರಡು ನಿಮಿಷ ಕಳೆಯಿತು. ನಾನು ಮಾಡಿದ ಪಾಪ ಕರ್ಮಗಳ ಅನಂತಕ್ಕೂ, ನನ್ನ ಕಣ್ಮುಂದೆ! ಪ್ರಯತ್ನಪಟ್ಟು ಜ್ಞಾಪಿಸಿಕೊಂಡರೂ, ಒಂದು ಒಳ್ಳೆಯ ಕೆಲಸ ಮಾಡಿದುದೂ ನೆನಪಿಗೆ ಬರಲಿಲ್ಲ. ಹೌದು ನಾನು ಪುರಾಣ ಶ್ರವಣ ಮಾಡಿದ್ದೇನೆ. ಅದು ಪುಣ್ಯ ಪ್ರದ ಅಲ್ಲವೆ? ಹೌದು, ಅಜಾಮಿಳನ ಕತೆ ನೆನಪಿಗೆ ಬಂತು

ಇನ್ನು ಸೆಕೆಂಡುಗಳ ಎಣಿಕೆ, ಅಷ್ಟೆ. ಮನಃಪೂರ್ವಕವಾಗಿ ನಾರಾಯಣ ನಾರಾಯಣ ಎಂದು ಜಪಿಸಿದೆ. ನನ್ನ ಶಕ್ತಿಮೀರಿ ಭಕ್ತಿಯ ಭಾವದಲ್ಲಿ ಮುಳುಗಿದೆ. 'ನಾರಾಯಣ' ಎಂದೆ ಕೊನೆಯುಸಿರು ಜಾರಿತು. ನಾನು ಸತ್ತು ಹೋದೆ.

ದೇಹದ ಕಣ್ಣು ಮುಚ್ಚಿದರೇನಂತೆ, ಆತ್ಮದ ಕಣ್ಣು ತೆರೆಯಿತು. ಕರಾಳ ರೂಪದ ಯಮದೂತರು, ಎದುರಿನಲ್ಲಿ!

'ನೀವು ಯಾರು?' ನಾನು ಕೇಳಿದೆ:
"ಯಮದೂತರು." ಅವರು ಹೇಳಿದರು
"ಯಾಕೆ ಬಂದಿರಿ"
"ನಿನ್ನನ್ನು ಕರೆದುಕೊಂಡು ಹೋಗುವುದಕ್ಕೆ"

"ಎಲ್ಲಿಗೆ?"
"ಯಮಲೋಕಕ್ಕೆ"
"ಯಾತಕ್ಕೆ?"
"ನಿನ್ನ ಪಾಪ ಕರ್ಮಗಳಿಗೆ ಶಿಕ್ಷೆಕೊಡುವುದಕ್ಕೆ"
"ನನಗೆ?"
"ಹೌದು. ನಿನಗೆ"

"ಸರಿಯಾಗಿ ನೋಡಿ, ನೆನಪು ಮಾಡಿಕೊಳ್ಳಿ. ಬೇರೆ ಯಾರೋ ಅಂದುಕೊಂಡು ನನ್ನ ಬಳಿಗೆ ಬಂದಿರಬೇಕು, ನೀವು"

"ಇಲ್ಲ. ನೀನೆ ನಮಗೆ ಬೇಕಾದವನು: ಮಾತನಾಡದೆ ಹೊರಡು ನಮಗೆ ಚೆನ್ನಾಗಿ ಗೊತ್ತು ನಮ್ಮ ಗುರಿ"

"ನಿಮ್ಮ ಗುರಿ ಅಲ್ಲ, ನಿಮ್ಮ ಕುರಿ ಅನ್ನಿ" ಎಂದು ಗೊಣಗುತ್ತಾ ಅವರ ಹಿಂದೆ ಹೊರಟೆ—'ಆಳಿನ ಜೊತೆ ವಾದಮಾಡುವುದು ವ್ಯರ್ಥ. ಅಲ್ಲವೆ?' ಅರಸನ ಜೊತೆಯಲ್ಲಿ ಹೋರಾಡುವ ನಿರ್ಧಾರ ಮಾಡಿಕೊಂಡೆ.

ಯಮಧರ್ಮ ನನ್ನ ಉದ್ಧಟತನಕ್ಕೆ ಕನಲಿ ಆರ್ಭಟಿಸಿದ.

“ ಪ ”

“ ಆಂ ” – ನನ್ನ ದನಿಯಲ್ಲಿ ದೀನತೆಯಿರಲಿಲ್ಲ; ದರ್ಪ ತುಂಬಿತ್ತು.

“ ಈ ಗರ್ವಕ್ಕೆ ನಿನ್ನ ಶಿಕ್ಷೆ ಹೆಚ್ಚುತ್ತದೆ ” ಯಮ ಎಚ್ಚರಿಸಿದ.

“ ನಾನು ಶಿಕ್ಷೆಗೆ ಪಾತ್ರನಲ್ಲ, ಶಿಕ್ಷೆ ಆಗ ಬೇಕಾಗಿರುವುದು ನಿಮಗೆ” ಎಂದೆ.

“ ಅದು ಹೇಗೆ ?”

“ಒಬ್ಬರಿಗೊಂದು ಇನ್ನೊಬ್ಬರಿಗೊಂದು ಇದು ಯಾವಧರ್ಮ ? ಒಂದು ಕಣ್ಣಿಗೆ ಬೆಣ್ಣೆ ಇನ್ನೊಂದು ಕಣ್ಣಿಗೆ ಸುಣ್ಣ ಹಚ್ಚುವ ರೀತಿ ನ್ಯಾಯವೆ ?

“ ಇಲ್ಲ ಅದು ಅನ್ಯಾಯ ”

“ ಹಾಗಾದರೆ ನೀವು ಮಾಡುತ್ತಿರುವುದು ಅನ್ಯಾಯ ಅದಕ್ಕೆ ಶಿಕ್ಷೆ ಆಗಲೇಬೇಕು ”

“ಅನ್ಯಾಯವನ್ನು ತೋರಿಸಿ ಮಾತನಾಡು”

“ತೋರಿಸುತ್ತೇನೆ. ಪೂರ್ವಸಾಕ್ಷಿಯಂತೆ ನಾನು ವೈಕುಂಠಕ್ಕೆ ಹೋಗಬೇಕು. ನನ್ನನ್ನು ಇಲ್ಲಿಗೆ ಕರೆಸಿರುವುದು ಅನ್ಯಾಯ ”

“ ಏನು, ಆ ಅಪೂರ್ವ ಪೂರ್ವ ಸಾಕ್ಷಿ ? ”

“ ಅಜಾಮಿಳನ ಸಾಕ್ಷಿ ”

“ ಅವನು ಪುಣ್ಯವಂತ ”

“ ನಾನು ಅವನಿಗಿಂತ ಹೆಚ್ಚು ಪುಣ್ಯವಂತ ! ”

“ ಹೇಗೆ ? ”

“ಅವನು ಸಾಯುವ ಗಳಿಗೆ, ಏನೋ ಹೇಗೋ ನಾರಾಯಣ ಎಂದು ಕೂಗಿದ. ನಾನು ಕಾಯಾ, ವಾಚಾ, ಮನಸಾ ನಾರಾಯಣ ಸ್ಮರಣೆ ಮಾಡಿದ್ದೇನೆ. ”

“ನಿಜ. ಆದರೆ ಪಶ್ಚಾತ್ತಾಪದಿಂದ ಸುಡಲಿಲ್ಲ. ನರ ನಾರಾಯಣನ ಸೇವೆ ಮಾಡಲಿಲ್ಲ. ”

“ಅಜಾಮಿಳನಿಗೆ ಮೋಕ್ಷ ಸಿಕ್ಕಿತೆಂದು ಪುರಾಣಗಳು ಹೇಳುತ್ತವೆ. ಆ ಮಾತು ಸುಳ್ಳೇನು ? ”

"ಮದುವೆ ಆದಮೇಲೆ, ಅದು ಅವನ ಕರ್ತವ್ಯ ಆಗಿತ್ತು.

"ಅಲ್ಲ. ಅವರ ಉದ್ಧಾರಕ್ಕಾಗಿಯೇ ಮನೆ-ಮಠ ಬಿಟ್ಟು ಅವರ ಹರಕು ಗುಡಿಸಿಲಿನಲ್ಲಿ ಬಾಳುಸಾಗಿಸಿದ. ಕತ್ತಲಲ್ಲಿ ಇದ್ದವರನ್ನು ಬೆಳಕಿಗೊಯ್ದ.

"ಹಾಗಾದರೆ ಆ ಉದ್ಧಾರ ಕಾರ್ಯಕ್ಕಾಗಿ ಅವನಿಗೆ ಮೋಕ್ಷ ದೊರೆಯಿತೆ?"

"ಹೌದು. ಮತ್ತೆ" ಯಮ, ನಿಶ್ಚಯದ ದನಿಯಲ್ಲಿ ಮುಂದುವರಿಸಿದ. "ಅಜಾಮಿಳನಂತೆ ನೀನೂ ಹರಿಜನೋದ್ಧಾರಕ್ಕೆ ಮನಸುಮಾಡು. ಹರಿಜನರು ಎಂದರೆ ದೀನರು, ದಲಿತರು, ಬಡವರು, ರೋಗಿಗಳು, ಅಶಕ್ತರು, ಹಿಂದುಳಿದವರು. ಅವರ ಸೇವೆ ಮಾಡುವುದಾದರೆ ನಿನಗೂ ಮೋಕ್ಷ ಸಿದ್ಧ. ಹರಿನಾಮ, ಹರನಾಮ. ರಾಮನಾಮ ಸ್ಮರಣೆ ಸೇವಾ ಮನೋಭಾವಕ್ಕೆ ಪ್ರತೀಕ ಇವನ್ನು ನೆನಪಿನಲ್ಲಿಡು"

"ಧರ್ಮರಾಜ ನನ್ನ ಕಣ್ಣು ತೆರೆಯಿತು. ನನ್ನನ್ನು ಆಶೀರ್ವದಿಸು" ಎಂದು ಸಾಷ್ಟಾಂಗ ನಮಸ್ಕಾರ ಮಾಡಿದೆ.

ಭಕ್ತಿಯ ಪ್ರಭಾವ. ನಿನಗೆ ಪುನಃ ಮಾನವ ಜನ್ಮ ದೊರೆಯಿತು. ಹೋಗು ಭೂಲೋಕಕ್ಕೆ ಹೋಗು. ಬಾಯಲ್ಲಿ ಹರಿಸೇವೆ, ಕೈಯಲ್ಲಿ ಜನಸೇವೆ. ಹೀಗೆ, ಹರಿಜನ ಸೇವೆ-ಮಾಡು. ನಿನಗೆ ಒಳ್ಳೆಯದಾಗಲಿ!" ಎಂದು ಯಮ ಬೆನ್ನುತಟ್ಟಿದ.

× × ×

ಯಾರೋ ಬೆನ್ನಿನಮೇಲೆ ಗುದ್ದಿದಂತಾಯಿತು. ಹೆದರಿದೆ. ಕಣ್ಣು ತೆರೆದೆ. 'ನಾರಾಯಣ' ಎಂದೆ.

ನನ್ನ ಮಗ ನಾರಾಯಣ 'ಏನಪ್ಪಾ?' ಎಂದು ಕೂಗಿದ.

'ಏನೂ ಇಲ್ಲ. ಒಂದು ಲೋಟ ನೀರು ತಂದು ಕೊಡು' ಎಂದೆ.



# ಇನಿಯಳ ಓಲೆಯು ಬಂದಾಗ

ಇನಿಯಳ ಓಲೆಯು ಬಂದಿತು ಇಂದು
ಕಳೆದಿಹ ಗಂಟನು ಕೊಟ್ಟಿತು ತಂದು !

— ೧ —

ಕಣ್ಣೊಳು ತುಂಬಿತು ರಸಧಾರೆ
ಕಿವಿಯೊಳು ಹಾಸಿತು ಸ್ವರಝುಣ ಝುಣಝುಣರೆ
ಮನದೊಳು ತುಂಬಿರೆ ನೀ ನೀರೆ
ನೀನೇ ಎನ್ನಯ ಉಸಿರು — ಬೇರಾರೆ ?
ಇದನೆ ಹಾಡುವ ನಾ ಕೊಂಡಾಡುವ
ಸೋಗಿನ ಸುಗ್ಗಿಯ ಹಿಗ್ಗಿನ ಹುಗ್ಗಿಯ
ನಿನ್ನಯ ಪತ್ರಕೆ ಉತ್ತರ ನಾ ಬರೆಲಾರೆ!
ನಾ ಬರಲಾರೆ, ನೀ ಬೇಗನೆ ಬಳಿಸಾರೆ !!

— ೨ —

ಓದುತ ಓದುತ ಮನನೆಗೆದಾಡಿತು
ಏರಿತು ಉತ್ಸಾಹದ ಕುದುರೆ,
ಜಿಗಿದಿತು ಮುಗಿಲಿಗೆ ನಾಲ್ಗಾಲೋಟ !
ಗುಡಿ ಕಟ್ಟಿತು ಭಾವಾಕಾರ
ಮೈ ಮರೆಯಿಸಿತು ಸುಳಿಸುತ್ತಿತುಮನ,
ಕಾಲ್ದೆಗೆದಿತು ಕೋಣೆಯ ಮೌನ !
ತಂಪಾಯಿತು ಮೋಹ;
ಕೆಂಪಾಯಿತು ಪ್ರೇಮಾಕಾರ !!

— ೩ —

ಭಾವ ಸಮಾಧಿಗೆ ಒಲುವಿನ ಶಕ್ತಿಯದೊ ನಲಿಯುತ ಬಂದ
ನಗೆಯಾಡುತ , ಕುಲುಕಾಡುತ ರಭಸದಿನಿಂದ
ಕೈಚಳಕದಲಿ , ಮೈಮುರುಕದಲಿ , ಚಿಮ್ಮಿತು ಬಣ್ಣದ ಕಾರಂಜಿ
ನಸು ನಗೆ ನೆಗೆಯಿತು ಮನ ಜುಮ್ಮೆಂದಿತು ,
ಕೈಚಾಚಿತು ನೆಲಕೆ —

ಎಟಕಿತಲ್ಲಿ ಕಲ್ಲು ಮಣ್ಣು ಮುಳ್ಳು ;
ಕಿರಿಯ ಸೋಂಕಿನಲೆ ಬೆರಳ ಉಂಗುರದ ಹರಳು !
ಆಗ ,

ಎಚ್ಚರ ಗೊಂಡುವು ಕಣ್ಣಿನ ಕುರುಡಿ
ಮನ ಹಾಕಿತು ಶರ್ತಿನ ಬಿರಡಿ !!

× × ×

ಇನಿಯಳ ಓಲೆಯು ಬಂದಿತು ಇಂದು
ಕಳೆದಿತು ಗಂಟನು ಕೊಟ್ಟಿತು ತಂದು !!

(ಧಾರವಾಡ ಆಕಾಶವಾಣಿಯ ಕೃಪೆಯಿಂದ) — **ವಸಂತ ಕುಷ್ಟಗಿ ಎಂ. ಎ.**

.... .... .... .... ....

# ಪುರಂದರ ದಾಸರ ಪುಣ್ಯ ಜೀವನ

– ಎಚ್. ಪಿ. ಜೋಶಿ ಶಿರವಾಳ

" ಪುರಂದರ ಗುರುಂ ವಂದೇ ದಾಸಶ್ರೇಷ್ಠಂ ದಯಾನಿಧಿಂ "

**ಪುರಂದರ ದಾಸರು ದಾಸಶ್ರೇಷ್ಠರಷ್ಟೇ ಅಲ್ಲ. ದಯಾನಿಧಿಗಳು. ಸಾಹಿತ್ಯ-ಸಂಗೀತಗಳೆರಡಕ್ಕೂ ಮೆರಗು ತಂದ ಮಹಾ ಮಹಿಮರು. ಕೃಪಣ ಶಿಖಾಮಣಿಗಳಾದ ಇವರ ಮನಃ ಪರಿವರ್ತನೆ ಹೇಗಾಯಿತು ? ಈ ದೇಹ ನಶ್ವರ ನೆಂದರಿತು ಅವರು ಯಾವ ಕಾಯಕದತ್ತ ಸಾಗಿದರು ! ಎಂಬುದನ್ನಿಲ್ಲಿ ಲೇಖಕರು ಚೆನ್ನಾಗಿ ಚಿತ್ರಿಸಿದ್ದಾರೆ.**

ಅದು–ವಿಜಯ ನಗರದ ವೀರಸಮ್ರಾಟನಾದ ಕೃಷ್ಣದೇವರಾಯನ ಕಾಲ. ಆಗ ಪುರಂದರ ಗಡದ ಶ್ರೀನಿವಾಸ ನಾಯಕರೆಂದರೆ ನವಕೋಟಿ ನಾರಾಯಣರೆಂದು ಹೆಸರು ಪಡೆದವರು. ಆದರೆ ಅವರಲ್ಲಿ ಧರ್ಮ ಪ್ರವೃತ್ತಿ ಇರಲಿಲ್ಲ. ಅವರ ಜಿಪುಣ ಜೀವನದಲ್ಲಿ ದಾನಧರ್ಮ ಅತಿಥಿಸತ್ಕಾರ ಇವುಗಳಿಗೆ ಸ್ಥಾನವೇ ಇರಲಿಲ್ಲ. ಇಂಥ ಅಸುರಿ ಸಂಪತ್ತಿನ ಹಂಬಲದಿಂದ ನಾಯಕರ ಮಾನವ ಜೀವನವು ಪಶುಜೀವನವಾಗಿ ಪರಿಣಮಿಸಹತ್ತಿತು.

## ಆಕಸ್ಮಿಕಪರಿವರ್ತನೆ

ಹೀಗಿರುವಲ್ಲಿ ಒಂದು ಅದ್ಭುತವಾದ ಘಟನೆಯು ಸಂಭವಿಸಿತು. ಮುಪ್ಪಿನ ವಿಪ್ರನೊಬ್ಬನು ಅವರ ಅಂಗಡಿಯಲ್ಲಿ ಬಂದು ತನ್ನ ಮಗನ ಉಪನಯನಕ್ಕಾಗಿ ಯೆಂದು ದ್ರವ್ಯ ಯಾಚನೆಯನ್ನು ಮಾಡಿದನು ನಾಯಕರು ಇಂದು ನಾಳೆಯೆಂದು ಕುಂಟು ನೆಪವನ್ನು ಹೇಳಿ ದಿನಗಳನ್ನು ನೂಕಹತ್ತಿದರು. ಆದರೂ ಬೇಸರದೆ ಬ್ರಾಹ್ಮಣನು ಅವರ ಬೆನ್ನು ಬಿಡಲಿಲ್ಲ, ಕೊನೆಗೆ ಅವರು ನಿರುಪಾಯರಾಗಿ ಖೊಟ್ಟಿನಾಣ್ಯವೊಂದನ್ನು ಬ್ರಾಹ್ಮಣನಮುಂದೆ ಒಗೆದರು. ಬ್ರಾಹ್ಮಣನು ಅದನ್ನು ಸ್ವೀಕರಿಸಲಿಲ್ಲ. ಹಾಗೆಯೇ ಎದ್ದು ಅವನು ನಾಯಕನ ಮನೆಗೆ ಹೋದನು. ನಾಯಕನ ಧರ್ಮಪತ್ನಿಯಾದ ಸರಸ್ವತಿಬಾಯಿಯವರೆದುರು ತನ್ನ ದೈನ್ಯವನ್ನು ತೋಡಿಕೊಂಡು, ಮಗನ ಮುಂಜಿವಿಗಾಗಿ ಧನಸಹಾಯವನ್ನು ಮಾಡಿರೆಂದು ಬೇಡಿಕೊಂಡನು. ಆಗ ಆ ಸಾಧ್ವಿಯ ಮನಸ್ಸು ಕರಗಿತು. ತನ್ನ ಮೂಗಿನಲ್ಲಿದ್ದ ಮೂಗುತಿಯನ್ನೇ ಅವರು ಆ ಬ್ರಾಹ್ಮಣನಿಗೆ ದಾನಮಾಡಿ ಬಿಟ್ಟರು. ಬ್ರಾಹ್ಮಣನು ಅದನ್ನು ತೆಗೆದುಕೊಂಡು ನೇರವಾಗಿ ನಾಯಕರ ಅಂಗಡಿಗೆ ಮಾರಲು ಬಂದನು. ನಾಯಕರು ಅದನ್ನು ನೋಡಿದೊಡನೆಯೆ ಅದು ತಮ್ಮ ಪತ್ನಿಯದೆಂದು [illegible]

ಹಾಗೆಯೇ ಅದನ್ನು ಅಂಗಡಿಯಲ್ಲಿಟ್ಟು ಇದೇ ಬಂದೆ, ಎಂದು ಬ್ರಾಹ್ಮಣನಿಗೆ ಹೇಳಿ ಲಗುಬಗೆಯಿಂದ ತಮ್ಮ ಮನೆಗೆ ಬಂದು ಹೆಂಡತಿಗೆ ‟ನತ್ತು ಯೇನಾಯಿತು” ಎಂದು ಕೇಳಿದರು. ಅವರ ಮಾತಿನ ಮರ್ಮವನ್ನರಿತ ಆ ಸಾಧ್ವಿಯು ನಾಯಕರ ಕೋಪಕ್ಕೆ ಹೆದರಿ ದೇವರಿಗೆ ಮೊರೆ ಇಟ್ಟು ವಿಷಪ್ರಾಶನ ಮಾಡತೊಡಗಿದಳು. ವಿಷದ ಪಾತ್ರೆ ತುಟಿಗೆ ತಲುಪುವದರೊಳಗಾಗಿ ಮೂಗುತಿಯು ಎಲ್ಲಿಂದಲೋ ಬಂದು ಆ ವಿಷದ ಪಾತ್ರೆಯಲ್ಲಿ ಬಿದ್ದಿತು. ಅದನ್ನು ತಂದು ನಾಯಕರಿಗೆ ಒಪ್ಪಿಸಿದಳು. ನಾಯಕರು ಆಶ್ಚರ್ಯಚಕಿತರಾದರು. ಕೂಡಲೇ ಅಂಗಡಿಗೆ ಬಂದು ನೋಡಿದರು. ನತ್ತು ಮಾಯವಾಗಿತ್ತು. ನಾಯಕರಿಗೆ ಚಿತ್ತಭ್ರಮೆಯಾಯಿತು. ಪೆಟ್ಟಿಗೆಯಲ್ಲಿಟ್ಟ ನತ್ತು ಮನೆಯಲ್ಲಿ ಹೇಗೆ ಹೋಯಿತು. ಇದರಿಂದ ನಾಯಕರಿಗೆ ದಿಕ್ಕು ತೋಚದಾಯಿತು. ಅತ್ತಿತ್ತ ಬ್ರಾಹ್ಮಣನನ್ನು ಹುಡುಕಿದರು. ಅವನು ಎಲ್ಲಿಯೂ ಸಿಗಲಿಲ್ಲ. ಅಷ್ಟರಲ್ಲಿ ಒಂದು ವಿಚಾರವು ಅವರ ಮನಸ್ಸಿನಲ್ಲಿ ಮಿಂಚಿತು. ಅದರಿಂದ ಅವರ ನೈಸಡುಗಿತು. ಅಂತಃಕರಣವು ಕರಗಿತು, ಕಂಗಳಿಂದ ಕಂಬನಿಗಳು ಉದುರಿದವು ಸರ್ವಸಮರ್ಥನಾದ ಶ್ರೀ ಹರಿಯೇ ತನ್ನನ್ನು ಎಚ್ಚರಿಸಲು ಬ್ರಾಹ್ಮಣ ರೂಪದಿಂದ ಬಂದಿದ್ದನೆಂದು ನಾಯಕರು ಮನಗಂಡರು. ಮನಸ್ಸು ಪೂರ್ತಿಯಾಗಿ ಪರಿವರ್ತನೆಯನ್ನು ಹೊಂದಿತು. ಅವರ ಜೀವನದ ಗುರಿಯೇ ಪಲ್ಲಟವಾಯಿತು. ‟ವಾರಿಜನಾಭನ ಕರುಣವೇ ಸ್ಥಿರ, ಸಂಸಾರ ಎರವು” ಎಂಬ ಅರಿವು ಬಂದಿತು. ‟ವಿತ್ತದೊಳಗೆ ಮನವಿಟ್ಟು ನಿನ್ನ ಉತ್ತಮ ನಾಮದ ಸ್ಮರಣೆಯ ಬಿಟ್ಟು ಮತ್ತನಾದೆ ಮತಿಗೆಟ್ಟು” ಎಂಬ ಅನುತಾಪ ಹುಟ್ಟಿತು, ‘ಅಳಲಿಸಿ ಪರರನು ಗಳಿಸಿತಂವರ್ಥವು ಉಳಿಯದು, ಅಳಿವುದು ಕಾಯವು ಉಳಿವದೊಂದೇ ಕೀರ್ತಿ” ‟ಉಂಟು ಆಶ್ರಯವೆಂದು ಬಡವನಕರೆ ತಂದುಕೊಟ್ಟು, ಮಾಡಿದ ಧರ್ಮ ಫಲ ತನ್ನದು” ಎಂದು ವಿವೇಕವು ಎಚ್ಚರಿಸಹತ್ತಿತ್ತು. ಈಗ ತಮ್ಮ ಎಲ್ಲ ಸಂಪತ್ತನ್ನೇ ಸರ್ವಾಂತರ್ಯಾಮಿ ಶ್ರೀ ಹರಿಗೆ ಸಮರ್ಪಿಸಿಬಿಡಲು ಅವರು ಸಿದ್ಧರಾದರು ‟ಕೃಷ್ಣಾರ್ಪಣ” ಎಂದು ತಮ್ಮ ಮನೆಯ ಮೇಲೆ ತುಳಸಿಪತ್ರವನ್ನಿಟ್ಟು, ತಮ್ಮ ಎಲ್ಲ ಸಂಪತ್ತನ್ನು ಬಡ ಬಗ್ಗರಿಗೆ ದಾನಮಾಡಿ ಬಿಟ್ಟರು. ಅನುತಾಪದಿಂದ ಬೆಂದುಹೋದ ಅವರ ಮನಸ್ಸಿಗೆ ಆಗ ತುಸು ಸಮಾಧಾನವಾಯಿತು. ‟ಆದದ್ದೆಲ್ಲ ಒಳಿತೆ ಆಯಿತು.” ಎಂದು ವಿಶ್ವಾಸ ಹುಟ್ಟಿತು ಶ್ರೀಧರನ ಸೇವೆ ಮಾಡಲು ಅವರಿಗೆ ಸಾಧನ ಸಂಪತ್ತಾಯಿತು.

‟ದಂಡಿಗೆ ಬೆತ್ತ ಹಿಡಿಯುವದಕ್ಕೆ ಮಂಡೆಬಾಗಿಸಲು ನಾಚುತಲಿದ್ದ” ನಾಯಕರು ಈಗ ಅದರ ಜೊತೆಗೆ ಗೋಪಾಳ ಬುಟ್ಟಿಯನ್ನು ಹಿಡಿದುಕೊಂಡು ಹೊರಟರು ಮುತ್ತು ಮಾಣಿಕ್ಯಗಳ ಮಾಲೆಗಳನ್ನು ತೊರೆದು ತುಳಸಿ ಮಾಲೆಗಳನ್ನು ಧರಿಸಿ [illegible]

ಪರಮಾರ್ಥ ಸಾಧನೆಗಾಗಿ ಅವರು ಸಿದ್ಧರಾದರು. ನಾಯಕರ ಧರ್ಮಪತ್ನಿಯು ನಾರಾಯಣನಿಗೆ ಅರ್ಪಿಸಿದ ಮೂಗುತಿಯು ನಾಯಕರಿಗೆ ಮುಕ್ತಿ ಪಥವನ್ನು ಹಿಡಿಯಲು ಅನುವು ಮಾಡಿಕೊಟ್ಟಿತು.

## ವೈರಾಗ್ಯದ ಪ್ರಖರತೆ

ಮನೆಬಿಟ್ಟು ಹೊರಟ ನಾಯಕರಲ್ಲಿ ವೈರಾಗ್ಯವು ಪ್ರತಿಕ್ಷಣ ಹೆಚ್ಚುತ್ತ ನಡೆಯಿತು. “ಪರಸತಿಯು, ಪರಧನವು, ಪರನಿಂದೆ ಪರಹಿಂಸೆ, ಪರಮ ಪಾತಕದ ಕಾರಣ” ವೆಂದು ಅವರಿಗೆ ಅನಿಸಹತ್ತಿತು. “ವಿಷಯದ ವಿಚಾರಬಿಡು, ವಿಹಿತಕರ್ಮವಮಾಡು, ವೈರಾಗ್ಯ ಭಾಗ್ಯಬೇಡು ಎಂದು ವಿವೇಕದ ಒಳನುಡಿಯು ಯಾವಾಗಲೂ ಸೂಚಿಸ ಹತ್ತಿತು. ಏನು ಇದ್ದರೇನು ? ಏನು ಪಡೆದರೇನು ? “ಆನೆ ಕುದುರೆ ಬಹುಸೇನೆ ಭಂಡಾರ ಮುತ್ತು ಮಾಣಿಕ್ಯ ಮಾನಿನಿಯರ ಸಂಗಲೊಳಲೊಟ್ಟಿ. ಎಲ್ಲ ಲೊಳಲೊಟ್ಟಿ” “ಈ ಸಿರಿನಂಬಿ ಹಿಗ್ಗಲಿಬೇಡ ಮನವೆ ?” ಹಿಂದೆ ನಳಮಾಂಧಾತರು ಏನಾದರೆಂಬುದನ್ನು ನೀನು ತಿಳಿದುನೋಡು ಎಚ್ಚರಿಕೆ ಈ ಭಾಗ್ಯ ಯಾರಿಗೂ ಸ್ಥಿರವಿಲ್ಲ” ಎಂದು ವಿವೇಕ ಮತ್ತೆ ಮತ್ತೆ ಎಚ್ಚರಿಸಹತ್ತಿತು. “ಮಡದಿ ಮಕ್ಕಳು ತನ್ನವರೆಂದು ರೊಕ್ಕವನ್ನುಗಳಿಸಿಕೊಂಡು ಸೊಕ್ಕಿನಿಂದ ತಿರುಗುವ” ಜೀವನವು ತೀರ ಹೇಯ ವಾದುದೆಂದು ಅವರ ದೃಢಭಾವನೆ ಯಾಯಿತು. “ಉದ್ಯೋಗ ವ್ಯವಹಾರ ನೃಪಸೇವೆ ಕುಶಲಗತಿ ಕ್ಷುಪ್ರತನ ಕಳವು ಪರದ್ರೋಹದಿಂದ ಗಳಿಸಿದ ಅರ್ಥವು ವ್ಯರ್ಥ” ಸತ್ತಮೇಲೆ ಲೋಕದೊಳು ಗಳಿಸಿದ್ದ ಪಾಪಪುಣ್ಯಗಳೆರಡೆ ಸಾಕಾರವಾಗಿ ಸಂಗಡ ಬಾಹೋವು” “ತೋರುವ ಸಿರಿಸಂಪತ್ತಿನ ನೆಲೆಯ ವಿಚಾರಿಸಲು ಅದು ಕನಸಿನಗಂಟು” “ಯಾರಿಗೆ ಯಾರುಂಟು ಎರವಿನ ಸಂಸಾರ ನೀರಮೇಲಿನ ಗುಳ್ಳೆ ನಿಜವಲ್ಲ” ಈ ತರಹದ ವಿಚಾರಗಳಿಂದ ಅವರ ಮನವು ವೈರಾಗ್ಯವನ್ನು ಹೊಂದಿತ್ತು.

## ದೇಹಸುಖವು ಹೇಯ

ದೇಹಸುಖವೇ ಮಾನವಜೀವನದ ಗುರಿಯೆಂದು ಬಗೆಯುವದು ತೀರ ತಪ್ಪು. “ಮನುಜ ಶರೀರ ವಿದೇನು ಸುಖ ? ಅದು ನೆನೆವರೆ ಘೋರವಿಹುದು !” ಎಂದು ಅವರಿಗೆ ಅನಿಸಹತ್ತಿತು.

ಈ ದೇಹವು ಎಂತಹದು, ಯಾತರದು, ಇದರ ಉಪಯೋಗವೇನು ? ಇಂತು ಮುಂತಾದ ಸಮಸ್ಯೆಗಳು ನಾಯಕರ ಕಣ್ಣೆದುರು ಸುಳಿದಾಡಹತ್ತಿದವು. ಈ ದೇಹವು “ ಎಲುಬು ರಕ್ತ ಮಾಂಸದ ಮೇಲೆ ಚರ್ಮದ ಹೊದಿಕೆ, ಒಳಗೆ ಮಲಮೂತ್ರ ಕ್ರಿಮಿ

ರಾಶಿಗಳು. " ಇದು ಹಲವು ವ್ಯಾಧಿಯ ಬೀಡು, ಪಂಚಭೂತದ ನಾಡು " ಸೋರುವ ಒಂಬತ್ತು ಬಾಗಿಲ, ಮಲದೊಳು ನೀರಿಲ್ಲದಿದ್ದರೆ ನಾರುವದೀದೇಹ,, " ಆಗು ಭೋಗಗಳನ್ನು ಆಗು ಮಾಡುತಲಿದ್ದು, ರೋಗ ಬಂದರೆ ಬಿದ್ದು ಹೋಗುವದೀದೇಹ, ಹಿಗ್ಗುವ ತಗ್ಗುವ ಮುಗ್ಗುವ ಕುಗ್ಗುವ ಅಗ್ನಿಯೊಳಗೆ ಬಿದ್ದು ದಗ್ಧವಾಗುವ ದೇಹಕ್ಕೆ ಹಿಗ್ಗುವದೇಕೆ ? ಎಂದು ಅವರಿಗೆ ಅನಿಸಹತ್ತಿತು.

## ಮೃತ್ಯುವಿನ ವಿಚಾರ

ಈ ದೇಹವು ಯಾತರದೇ ಇರಲಿ,ನಿತ್ಯವಿದೆಯಾ? ಹಾಗೂ ಇಲ್ಲ. ನೀರಬೊಬ್ಬುಳಿಯಂತೆ ನಿತ್ಯವಲ್ಲವೀದೇಹ, " ಕೂಳಿನ ಬಲದಲಿ ಬೆಳದ ಕಾಯದಬಾಳು ಸ್ಥಿರವಿಲ್ಲ" " ಉಬ್ಬದಿರು ಉಬ್ಬದಿರು ಎಲೆ ಮಾನವಾ, ಹೆಬ್ಬುಲಿಯಂತೆ ಯಮ ಬೊಬ್ಬಿಡುತ ಕಾದಿರುವ ,, " ಸಾಗರದ ತೆರೆಯಂತೆ ಸಾವು ಹುಟ್ಟೆರಲಾಗಿ ಭೋಗ ಭಾಗ್ಯಗಳೆಂದು ಬಳಲುವದೇಕೆ? ನಾಗಪೆಡೆ ನೆರಳಲ್ಲಿ ನಡಗುವ ಕಪ್ಪೆಯ ರೀತಿ ಕೂಗಿ ಚೀರಿದರೆ ಯಾರು ಕೇಳುವರು ? " " ಇತ್ತ ಬಾರೆಂದು ಯಮ ಭಟರು ಸೆಳೆದೊಯ್ಯುವಾಗ ಯಾರು ಬರುವರು ನಿನ್ನ ಹಿಂದೆ " ತನವು ತನ್ನದಲ್ಲ, ತನ್ನವರಾರಿಲ್ಲ, ಅನುಕೂಲವಿರುವಾಗ ಸತಿಸುತರೆಲ್ಲ, ಗತಿಯು ತಪ್ಪಿ ಹೋಗುವಾಗ ಸತಿಯು ಸುತರು ಬಾಹರೆ, ಅಗ ಎತ್ತಿದ ಕಸಕಿಂತ ಕಡೆಯಾಗುವದೀದೇಹ

## ಪರಮಾರ್ಥ ಸಾಧನ

ದೇಹ ಸುಖಕ್ಕಾಗಿ ಹಂಬಲಿಸುವಂಥ ಸಾಂಸಾರಿಕ ಜೀವನವುಅವರಿಗೆ ಅಪೂರ್ಣವೆಂದೆನಿಸ ಹತ್ತಿತು. " ಕತ್ತಲೆ ಬೆಳದಿಂಗಳು ಈ ಸಂಸಾರ " ಇದರಲ್ಲಿ ಬಿಂದು ಮಾತ್ರವೇ ಸುಖ, ದುಃಖ ಪರ್ವತದಷ್ಟು " ಇಲ್ಲಿ " ನಖಿಕೇಶ ಪರಿಯಂತ ನಾನಾ ಅನುಭವದ ನೋವು " " ಒಂದಲ್ಲ ಎರಡಲ್ಲ ನೊಂದಜೀವನಕೆ ದುಃಖ, ಒಂದೊಂದು ಕ್ಷಣಕೆ ಅನಂತ ದುಃಖ. ಇಂಥ ಸುಖ ದುಃಖದ ದೇಹ ಗೇಹವೆ ಸಾಕು. ಎಂದು ಅವರ ಮನಸಿನ ನಿರ್ಣಯವಾಯಿತು. ದೇಹವು ಅನಿತ್ಯ, ಆತ್ಮನು ಮಾತ್ರ ನಿತ್ಯ ಆದುದರಿಂದ ಜೀವನದ ಗುರಿಯು ದೇಹ ಸಂಬಂಧಿಯಾಗಿರದೆ, ಆತ್ಮ ಸಂಬಂಧಿಯಾಗಿರಬೇಕು. ಪರಮಾತ್ಮನನ್ನು, ಅನುಸರಿಸಬೇಕು. ಜೀವನವು ಅಧ್ಯಾತ್ಮಮಯವಾಗಬೇಕು.

## ಸಾಧನವಾವುದು

ಈ ಅಸಾಮಾನ್ಯವಾದ ಗುರಿಯನ್ನು ಸಾಧಿಸುವದೆಂತು? ಈ ಅನಂತ ದು:ಖಗಳ ಬೇಗೆಯೊಳಗಿಂದ ಬೇರ್ಪಡಿಸಿ ಸಂಕೈಸುವರಾರು? ಈ ಭವ ರೋಗಕ್ಕೆ ವೈದ್ಯನು ಯಾರು

ಇದರಿಂದ ಮುಕ್ತಗೊಳಿಸುವ ಔಷಧಿ ಯಾವುದು? ಇಂತು ಮುಂತಾದ ಪ್ರಶ್ನೆಗಳು ನಾಯಕರ ತಲೆಯಲ್ಲಿ ಗೊಂದಲವನ್ನೇ ಎಬ್ಬಿಸಿದವು. ಮನಸ್ಸಿನ ಅತೃಪ್ತಿ ವಿಚಾರಗಳ ವಿಪ್ಲವ ಇವುಗಳೊಂದಿಗೆ ಅದೆಷ್ಟೋ ಕಾಲವು ಕಳೆಯಿತು. ಕೊನೆಗೊಮ್ಮೆ ಆ ಸಮಸ್ಯೆಗಳ ಉತ್ತರ ದೊರೆಯಿತು. "ಆತನ ಭಕುತರಿಗೆ ಕೇಡಿಲ್ಲ. ಎಂದು ಅವರ ಅಂತರಾತ್ಮನ ಸೂಚನೆ ಬಂದಿತು. "ಅಪಾಯ ಕೋಟಿಗಳಿಗೆ ಉಪಾಯ ಒಂದೇ, ಹರಿ ಭಕುತರು ತೋರಿಕೊಟ್ಟ ಉಪಾಯ ಒಂದೇ, ಪುರಂದರ ವಿಠಲನ ಚೋರಿಟ್ಟು ಕರೆವ ಉಪಾಯ ಒಂದೇ "ಸಿಂಗನ ಪೆಗಲೇರಿದವರಿಗೆ ಕರಿಭಂಗವೇಕೆ? ಹಾಗೆ ರಂಗನ ಕೃಪೆಯುಳ್ಳವಗೆ ಭವಭಂಗಗಳೇತಕ್ಕೆ? ಎಂದು ಬುದ್ಧಿಯು ಸೂಚಿಸ ಹತ್ತಿತು. "ಭಕುತಿಯು ಮುಕ್ತಿಗೆ ಸೋಪಾನ ತರಣಿ ಭವಾಬ್ಧಿಗೆ" ಭಕ್ತಿ ಇಲ್ಲದ ಅಘಮರಿಗೊಂದು ಕತ್ತಲೆ ಮನೆಯೆ ಸಾಕ್ಷಿ, ಮುಕ್ತಿ ಪಡೆವುದಕ್ಕೆ ಪುರಂದರ ವಿಠಲನ ಭಕ್ತನಾಗಿರುವದೆ ಸಾಕ್ಷಿ, ಎಂದು ವಿವೇಕವು ಸಾಕ್ಷಿಯನ್ನು ನುಡಿಯ ಹತ್ತಿತು. ಆಗ "ಶಾವಕರುಣೆಯೋ ಪುರಂದರ ವಿಠಲನೆ ಭಾವ ಭಕುತಿಯ ಕೊಟ್ಟು ಸಲಹಯ್ಯಾ ಹರಿಯೇ" ಎಂದು ದೇವರಿಗೆ ಮೊರೆ ಇಟ್ಟರು. "ಪ್ರೀತಿಯಿಂದಲಿ ತನ್ನ ಭಕುತರ ಸಲಹುವ ಆತನ ಪಾಡುವೆ ಅನವರತ" ಎಂದು ನಿರ್ಧಾರ ಮಾಡಿ, ವೈಕುಂಠದ ಹೆದ್ದಾರಿಯನ್ನು ಹಿಡಿದರು.

## ಮಾನವ ದೇಹದ ಮಹತ್ವ

ಪರಮಾರ್ಥ ಸಾಧನೆಯೇ ಅವರ ಜೀವನದ ಜೀವಾಳವಾದ ಮೇಲೆ ಅದರ ಪೂರ್ತಿಕೆಗಾಗಿ ಈ ಮಾನವ ದೇಹವೇ ಬಲು ಉಪಯುಕ್ತವಾದುದೆಂದು ಅವರಿಗೆ ಅನಿಸಹತ್ತಿತು. "ಕ್ರಿಮಿಕೀಟಕನಾಗಿ ಹರಿಹರಿಣವಾಗಿ ಕತ್ತೆ ಕಾಡಿಯಾಗಿ ಹಂದಿಶುನಕನಾಗಿ ಹುಟ್ಟಿದಂದು ಹರಿಶರಣಂತೆನಲುಂಟೆ, ಎಂದಿಗೂ ಇಲ್ಲ. ಇದು ಮಾನವ ದೇಹ ಧಾರಿಗಳಿಗೆ ಮಾತ್ರ ಸಾಧ್ಯ. ಆದಕ್ಕಾಗಿಯೇ "ಮಾನವ ಜನ್ಮ ದೊಡ್ಡದು. ಇದು ಹಾನಿ ಮಾಡಲಿಬಾರದು." "ನೆರೆಛಿದ್ರ ಕುಂಭದ ನೀರಿನಂತೆ ಆಯುಷ್ಯವು ಸರಿಯುತ್ತಿದೆ" ಆದುದರಿಂದ "ಸುಳ್ಳಿನ ಸಂಸಾರ ಸುಳ್ಳಿಗೆ ಸಿಕ್ಕದೆ, ದಾಳಿಬಾರದ ಮುನ್ನ ಧರ್ಮಗಳಿಸಬೇಕು. ಈ ನರ ದೇಹದಲ್ಲಿಯ ನಾರಾಯಣನನ್ನು ಕಾಣಬಹುದೆಂಬ ಹಿರಿಯರ ಅನುಭವದ ನುಡಿ ನೆನಪಿಗೆ ಬಂದಿತು. "ಮನುಜ ಶರೀರವಿದೇನು ಸುಖ" ಎಂದು ಒಮ್ಮೆ ಅನಿಸಿದರೂ ಅವರ ನೆರವಿನಿಂದಲೇ "ಸದ್ಧರ್ಮದೊಳ್ನಡೆದರೆ ಆಗ ಸುಖ." ಎಂದು ಕೊಂಡರು.

## ಭಕ್ತಿ ಜೀವನದ ಉಪಕ್ರಮ

ಹರಿದಾಸರಾಗಿದ್ದ ಶ್ರೀನಿವಾಸ ನಾಯಕರು ಹರಿದಾಸರ ದಿವ್ಯ ಜೀವನವನ್ನು ಕೈಕೊಂಡರು. ಭರತ ಖಂಡದಲ್ಲಿ ಭೂ ವೈಕುಂಠವೆಂದು ಹೆಸರು ಪಡೆದ ಪಂಥರ

ಕ್ಷೇತ್ರಕ್ಕೆ ತೆರಳಿದರೆಂದು ಐತಿಹ್ಯವುಂಟು. ಅಲ್ಲಿ ವಿಠಲನ ಉಪಾಸನೆಯನ್ನು ಬಲು ಭಕ್ತಿಭಾವದಿಂದ ನಡೆಸಿದರು. ‟ಕಾಲಿಗೆ ಗೆಜ್ಜೆಯ ಕಟ್ಟಿ ನೀಲವರ್ಣನಗುಣ ಆಲಾಪಿಸುತ್ತ ಬಲು ಓಲಗ ಮಾಡಿದರು” ‟ಭೂಮಂಡಲಕ್ಕೆ ಪಾಂಡುರಂಗ ವಿಠಲ ಪರದೈವವೆಂದು ಡಂಗುರವ ಸಾರಿದರು” ಮತ್ತು ಮಧುಕರ ವೃತ್ತಿಯಿಂದ ತಮ್ಮ ಜೀವನವನ್ನು ಸಾಗಿಸಿದರು. ಇವರಲ್ಲಿ ಅವರಿಗೆ ಎಷ್ಟೋ ದಿವಸಗಳು ಗತಿಸಿದವು. ಆದರೂ ಅವರ ಮನಸ್ಸಿನ ಕಾರ್ಯಕೆ ಫಲಿಸಲಿಲ್ಲ. ಆದರಿಂದ ಅವರ ಮನಸ್ಸು ಕಳವಳಗೊಂಡಿತು. ‟ದಾರಿಯಾವುದಯ್ಯಾ ವೈಕುಂಠಕ್ಕೆ ದಾರಿಯಾವುದಯ್ಯಾ. ಆದಾರ ಮೂರುತಿ ನಿನ್ನ ಪಾದ ಸೇರುವದಕ್ಕೆ ದಾರಿ ತೋರಿಸಯ್ಯಾ” ಎಂದು ಏಕೋಭಾವದಿಂದ ಅವರು ಮತ್ತೆ ಮತ್ತೆ ದೇವರಿಗೆ ಬೇಡಿಕೊಳ್ಳ ಹತ್ತಿದರು. ಮತ್ತು ಅಂಥ ಮನಸ್ಥಿತಿಯಲ್ಲಿಯೇ ಅವರು ಭಾವಪರವಶರಾಗಹತ್ತಿದರು.

## ಗುರುವಿನ ಅವಶ್ಯಕತೆ

ಈ ಭಾವಾವೇಶದಲ್ಲಿಯೇ ದೇವರ ಕರುಣೆಯ ಕಿರಣವು ಅವರ ಮೇಲೆ ಮಿಂಚಿತು. ಅವರ ಬೆಳಕಿನಲ್ಲಿಯೇ ಅವರ ಮುಂದಿನ ದಾರಿಯು ನಿಚ್ಚಳವಾಗಿ ತೋರಿಯಿತು. ‟ಗುರುವಿನ ಚರಣಕ್ಕೆರಗಲಿಬೇಕು. ತದನಂತರ ಪಾದವನರಿಯಲಿಬೇಕು” ಎಂದು ಪರಮಾತ್ಮನ ಪ್ರೇರಣೆಯಾಯಿತು. ‟ಗುರು ಉಪದೇಶವಿಲ್ಲದ ಜ್ಞಾನ ಖುಗದ ಉಪವಾಸದಂತೆ? ಆರು ಶಾಸ್ತ್ರವನೋದಿದರೇನು, ಕೊರಳೊಳು ಮಾಲೆಯ ಧರಿಸಿದರೇನು, ಶರೀರಸುಖವನ್ನು ಬಿಡಿಸಿದರೇನು? ಪುರಂದರ ವಿಠಲನ ನಾಮಮಹಿಮೆಗಳ ತೋರಬಲ್ಲ ಸದ್ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕ್ತಿ” ಆದ್ದರಿಂದ ಗುರುಗಳ ಅನುಗ್ರಹವನ್ನು ಪಡೆಯಲು ದಾಸರು ಬಹಳ ಆತುರಗೊಂಡರು.

## ಗುರುಗಳಾರು

‟ಹೊಟ್ಟೆಗಾಗಿ ನಾನಾವೇಷ, ನಾಗುವದು ಹಲವು ಮೋಸ” ಎಲ್ಲಿ ನೋಡಿದರಲ್ಲಿ ಇಂಥ ಜನರ ಆಕಾರ ಸ್ಥಾನಗಳೆ ಬಹಳ. ಆದುದರಿಂದ ಎಲ್ಲಿ ಹೋಗಬೇಕು? ಯೋಗ್ಯರಾದ ಗುರುಗಳು ಯಾರು? ಅವರು ದೊರೆಯುವದು ಎಲ್ಲಿ? ಅವರನ್ನು ಕಾಣುವದೆಂತು? ಈ ವಿಚಾರ ತರಂಗಗಳಿಂದ ಚಿತ್ತಗ್ಲಾನಿಯಾಯಿತು. ಮನಸ್ಸು ಏಕಾಗ್ರವಾಯಿತು. ಅಂತರಂಗದಲ್ಲಿ ಭಾವಬಲಿಯಿತು. ವಿಜಯನಗರದಲ್ಲಿರುವ ಶ್ರೀಗುರು ವ್ಯಾಸರಾಯರ ಕಡೆಗೆ ಹೋಗಲು ದಾಸರಿಗೆ ಹೃದಯಸ್ಥ ಪರಮಾತ್ಮನ ಅಂತಃ ಪ್ರೇರಣೆಯಾಯಿತು. ಆಗ ಒಂದು ಬಗೆಯ ಸಮಾಧಾನವಾಯಿತು. ಕೂಡಲೆ ದಾಸರು ವಿಜಯ

(೩೮ ನೆಯ ಪುಟಕ್ಕೆ ಮುಂದುವರಿದಿದೆ)

## ಶ್ರೀ ಮನ್ ಮಧ್ವಾಚಾರ್ಯರ ವೈಶಿಷ್ಟ್ಯ

**ಶ್ರೀ ಸಗರ ಪ್ರದ್ಯುಮ್ನಾಚಾರ್ಯ ಶಹಪುರ.**

★

**ಆಚಾರ್ಯತ್ರಯರಲ್ಲಿ ಶ್ರೀಮನ್ಮಧ್ವಾಚಾರ್ಯರೂ ಒಬ್ಬರು. ದ್ವೈತಮತಸ್ಥಾಪನಾಚಾರ್ಯರೆಂದೂ, ಶ್ರೀಮನ್ಮಧ್ವಮತ ಸಿದ್ಧಾಂತ ಪ್ರತಿಪಾದಕರೆಂದೂ ಇವರ ಪ್ರಖ್ಯಾತಿ ಹರಡಿದೆ. ಪ್ರಸ್ಥಾನತ್ರಯಗಳ ಪ್ರಮಾಣದಿಂದ, ಜಗತ್ತು ಸತ್ಯ ನಾವು ಪರಮಾತ್ಮನ ದಾಸರು. ಭಕ್ತಿಪೂರ್ವಕ ಆತನನ್ನು ಭಜಿಸಿ ಮುಕ್ತಿ ಪಡೆಯಬೇಕೆಂದು ಸಾರಿದ್ದಾರೆ. ಅವರನ್ನು ಕುರಿತಾದ ಈ ಲೇಖನದಲ್ಲಿ ಲೇಖಕರು ಇನ್ನೂ ಕೆಲ ವಿಷಯಗಳನ್ನು ವಿವೇಚಿಸಿದ್ದಾರೆ...**

★

ಸಕಲ ವ್ರತಗಳಲಿ ಏಕಾದಶಿಯಮಾಡು ।
ನಿಖಿಳ ಸುರರೊಡೆಯ ಹರಿಯೆಂದು ಕೊಂಡಾಡು ॥
ಸಕಲ ಸಾಮ್ರಾಜ್ಯವಾತನ ಕೈಯ್ಯಬೇಡು ।
ಸುಖತೀರ್ಥ ಗುರುವರನ ಗುಣಗಾನಮಾಡು ॥
॥ ವಕ್ಷ್ಯಾಮಿ ವಾಯೋಃ ಅವತಾರ ಲೀಲಾಂ ॥

ಕಲಿಯುಗದಲ್ಲಿ ಸಜ್ಜನರ ಮನಸ್ಸು ಕಲಿಮಲ ಕಲುಷಿತವಾಯಿತು. ವಿಜ್ಞಾನ ಭಾನುವು ಅಸ್ತಂಗತನಾದನು. ಶ್ರೀಹರಿಯಾಜ್ಞೆಯನ್ನು ಶಿರೋರತ್ನದಂತೆ ತಲೆಯಲ್ಲಿ ಧರಿಸಿ, ದೇವತೆಗಳ ಪ್ರಾರ್ಥನೆಯನ್ನು ಹಾರದಂತೆ ಹೃದಯದಲ್ಲಿ ಧರಿಸಿ ಸಜ್ಜನರನ್ನು ಅನುಗ್ರಹಿಸಲಿಕ್ಕಾಗಿ ಶ್ರೀವಾಯುದೇವರೇ ಮಧ್ವಾಚಾರ್ಯರೆಂಬ ಹೆಸರಿನಿಂದ ಪಾಜಕ ಕ್ಷೇತ್ರದಲ್ಲಿ ನಡುಮನೆಯೆಂಬ ಬ್ರಾಹ್ಮಣರವಂಶದಲ್ಲಿ ಕ್ರಿ. ಶ. ೧೩ ನೆಯ ಶತಮಾನದಲ್ಲಿ ಅವತರಿಸಿದರು. ಇದಕ್ಕೆ ಶೃತಿಪ್ರಮಾಣವೂ ಇದೆ. "ಮಧ್ವೋವೋ ನಾಮ ಮಾರುತಂ ಯಜತ್ರಾಃ" ಎಂದು ಪ್ರಥಮೋ ಹನುಮನ್ನಾಮ ದ್ವಿತೀಯೋ ಭೀಮ ಏವಚ । ಪೂರ್ಣಪ್ರಜ್ಞಸ್ತೃತೀಯಸ್ತು ಭಗವತ್ಕಾರ್ಯ ಸಾಧಕಃ" ಎಂಬೋಕ್ತಿಯೂ ಇದಕ್ಕೆ ಸಾಕ್ಷಿಭೂತವಾಗಿದೆ. ಶ್ರೀಮದ್ವೈಷ್ಣವಸಿದ್ಧಾಂತ ಪ್ರತಿಷ್ಠಾಪನಾಚಾರ್ಯರೆಂದು ಕೀರ್ತಿವೆತ್ತ ಇವರು (೩೭) ಮೂವತ್ತೇಳು ಗ್ರಂಥರತ್ನಗಳನ್ನು ರಚಿಸಿ ಸರ್ವ ದುರ್ಮತಗಳನ್ನು ಭಂಜಿಸಿ ಅನಾದಿಯಿಂದಲೂ ಇದ್ದ, ಕಾಲಮಹಿಮೆಯಿಂದ ಮಲಿನವಾಗಿದ್ದ ಸತ್ ಸಿದ್ಧಾಂತಗಳನ್ನು ಹರಿಭಕ್ತರ ಉದ್ಧಾರಕ್ಕಾಗಿ ಪುನರುತ್ಥಾಪನೆಮಾಡಿದರು.

ಶ್ರೀಮದಾಚಾರ್ಯರ ಒಂದೊಂದು ಗ್ರಂಥರತ್ನವು ಅನವದ್ಯವೂ ಬಹ್ವರ್ಥಪೂರಿತವೂ, ಗಂಭೀರವೂ, ಆದ ವಾಕ್ಯಗಳಿಂದ ಕೂಡಿದೆ. ಶ್ರೀನಾರಾಯಣ ಪಂಡಿತಾ

ಚಾರ್ಯರು ವರ್ಣಿಸಿದಂತೆ "ಬಾಲಸಂಘಮಪಿ ಬೋಧಯದ್ಭೃಶಂ ದುರ್ನಿರೂಪವಚನಂಚ ಪಂಡಿತೈಃ" ಆಗಿದೆ ಎಂದರೆ, ತಿಳಿಯಬೇಕೆಂಬ ಅಪೇಕ್ಷೆಯುದ್ದ ತಿಳಿಕೊಳ್ಳುವಷ್ಟು ಸೂಕ್ಷ್ಮ ಬುದ್ಧಿಯಿಲ್ಲದ ಸ್ಥೂಲಬುದ್ಧಿಯ ಜನರಿಗೂ ಸಾಮಾನ್ಯರೀತಿಯಿಂದ ತಿಳಿಯುವಂತೆಯೂ, ಪಂಡಿತರಿಗೂ ತಿಳಿಯಲಾರದಷ್ಟು ಕಠಿಣವಾದ ವಾಕ್ಯಾರ್ಥಪೂರ್ಣವಾಗಿಯೂ ಇದೆ. ಇದರ ಪೂರ್ಣಪರಿಚಯವು ಪಂಡಿತರಿಗೂ ಅಗಮ್ಯವು. ಇಂತಹ ೧೦ ಪೀಠವಾದ ಶಾಸ್ತ್ರರತ್ನ ಸಮೂಹವು ವೈದಿಕ ಸಾಮ್ರಾಜ್ಯದ ಕೋಶಾಗಾರದಲ್ಲಿ ಪ್ರಜ್ವಲಿಸುತ್ತಲಿದೆ.

( ವಾಚೋವಚೋವಿಶುದ್ಧ್ಯರ್ಥಂ ಸಂಗಮ್ಯಂತೆ ಗುರೋರ್ಗಿರಃ )

ಎಂಬಂತೆ, ಮಹಾತ್ಮರ ಚರಿತ್ರಾನುವಾದವು ಮನಸ್ಸನ್ನು ಶುದ್ಧಗೊಳಿಸುವದು. ಅತುಳೈಶ್ವರ್ಯಕ್ಕೆ ಅಭಿಮಾನಿಯಾದ ಲಕ್ಷ್ಮಿಯಿಂದ ಸಂಭ್ರಮದಿಂದ ಪೂಜೆಗೊಳ್ಳುವ ಶ್ರೀ ಹರಿಯು ಬಡಭಕ್ತನ ಭಕ್ತಿಯುತ ದೂರ್ವಾಂಕುರವನ್ನು ಸ್ವೀಕರಿಸನೇ? ಸುದಾಮನ ಹಿಡಿ ಅವಲಕ್ಕಿಗೆ ಪುರುಷಾರ್ಥವನ್ನು ದಯಪಾಲಿಸಲಿಲ್ಲವೆ? ಅಂತೆಯೆ ನನ್ನ ಅಲ್ಪಮತಿಗೆ ತೋಚಿದ ಎರಡು ಮಾತುಗಳನ್ನು ಶ್ರೀಮನ್ ಮಧ್ವಾಂತರ್ಗತ ಶ್ರೀನಾರಾಯಣನ ಅಡಿದಾವರೆಗಳಲ್ಲಿ ವಿನಮ್ರ ಭಕ್ತಿಯುಳ್ಳವನಾಗಿ ಅರ್ಪಿಸಲು ಯತ್ನಿಸಿದ್ದೇನೆ. ಆಚಾರ್ಯರು ಮೂವತ್ತೇಳು ಗ್ರಂಥಗಳನ್ನು ರಚಿಸಿದ್ದಾರೆಂದು ಹೇಳಿದೆಯಷ್ಟೇ. ಅವರಿ ಅವರು ಬದರಿಕಾಶ್ರಮದಲ್ಲಿ ಶ್ರೀ ವೇದವ್ಯಾಸರ ಸಂದರ್ಶನ ಪಡೆದು. ಅನುಗ್ರಹವೂ ಪಡೆದುದರಿಂದ ಅವರ ನೈಜ ಅಭಿಪ್ರಾಯಗಳನ್ನ ಸಮರ್ಥಿಸುವ ಬ್ರಹ್ಮಸೂತ್ರ ಭಾಷ್ಯ. ಉಪನಿಷತ್ ಭಾಷ್ಯ, ಗೀತಾಭಾಷ್ಯ ಮಹಾ ಭಾರತ ಭಾಗವತತಾತ್ಪರ್ಯ ನಿರ್ಣಯಾದಿ ಗ್ರಂಥಗಳು ಉದ್ಭವಿಸಿದವು. "ಗೀತಾಭಾಷ್ಯಂ ವಿಧಾಯಾಸೌ ಪ್ರಥಮಂ ತುಷ್ಟಿದಂ ಹರೇಃ" ಎಂಬೋಕ್ತಿಯಂತೆ ಶ್ರೀ ಮಧ್ವಾಚಾರ್ಯರು ಮೊಟ್ಟಮೊದಲು ಗೀತಾ ಭಾಷ್ಯವನ್ನ ಹರಿಯ ಪ್ರೀತಿಯಗೋಸುಗ ರಚಿಸಿದರು. ಅದನ್ನು ಬಾದರಾಯಣರಿಗೆ ತೋರಿಸಲು ಸರ್ವತಃ ಯೆಂಬ ಪದವನ್ನು ತೆಗೆದುಹಾಕಿ ಲೇಶತಃ ಎಂದು ಮಾಡಿದರು. "ಗೀತಾರ್ಥಂ ವಕ್ಷ್ಯಾಮಿ ಲೇಶತಃ" ಇದರಿಂದಲೇ ತಿಳಿಯಬಹುದಾಗಿದೆ. ಕೂಲಂಕಷವಾಗಿ ವಿಮರ್ಶೆಯಿಂದ ನಿರ್ಧರಿಸಿರುವ ಗೀತಾ ಭಾಷ್ಯದ ಘಟ್ಟವು ಅತ್ಯಂತ ಹೃದಯಂಗಮವಾಗಿದೆಯೆಂದು! ಈ ಬಗೆಯಾದ ಪ್ರತಿಪಾದನೆಯು ಮಿಕ್ಕ ಯಾವ ಭಾಷ್ಯಕಾರರ ಗ್ರಂಥಗಳಲ್ಲೂ ಕಂಡುಬರುವದಿಲ್ಲ. ಸರ್ವಜ್ಞ ಶಿರೋಮಣಿಗಳಾದ ಆಚಾರ್ಯರು ಯಾವ ಒಂದು ವಿಷಯವನ್ನು ನಿರೂಪಿಸುವಾಗಲೂ ಜಿಜ್ಞಾಸುಗಳ ಮನಸ್ಸಿನ ಶಂಕಾ ಪಿಶಾಚಿಯು ನಿರ್ಮೂಲವಾಗುವಂತೆ ಅನೇಕ ಶ್ರುತಿ ಸ್ಮೃತಿ ವಾಕ್ಯಗಳನ್ನು ಉದಾಹರಿಸಿ ನಿಷ್ಕರ್ಷಿಸುತ್ತಾರೆ.

" ಶ್ರೀಮನ್ ಮಧ್ವಮತೆ ಹರಿಃಪರತರಃ " ಎಂಬಂತೆ ಗೀತಾಭಾಷ್ಯದಲ್ಲಿ ಹರಿ ಸರ್ವೋತ್ತಮತ್ವವನ್ನು ಆಚಾರ್ಯರು ಶ್ರೀಕೃಷ್ಣವಚನದಿಂದಲೇ ಸಾಧಿಸಿ ತೋರಿಸಿದ್ದಾರೆ. "ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ" "ಅತೋಽಸ್ಮಿ ಲೋಕೆ ವೇದೇಚ ಪ್ರಥಿತಃ ಪುರುಷೋತ್ತಮ" ಇತ್ಯಾದಿಯಾದ ಸ್ಪಷ್ಟವಾದ ಶ್ರೀಕೃಷ್ಣನ ವಾಕ್ಯಗಳನ್ನು ಪರಿಶೀಲಿಸಿದರೆ ಭಾಷ್ಯಕಾರರ ಪ್ರತಿಪಾದನೆಯು ಗೀತಾಚಾರ್ಯನ ಅಭಿಪ್ರಾಯವನ್ನು ಉತ್ತಮ ರೀತಿಯಿಂದ ತೋರಿಸತಕ್ಕದ್ದಾಗಿದೆ. ಎಂದು ನಿಷ್ಪಕ್ಷಪಾತಿಗಳಾದ ವಿಮರ್ಶಕರಿಗೆ ತಾನಾಗಿಯೇ ಗೊತ್ತಾಗುವದು. ಇದೇರೀತಿಯಾಗಿ ಮೂವತ್ತೇಳು ಗ್ರಂಥಗಳನ್ನು ವಿರಚಿಸಿ ಭಾರತೀಯರಿಗೆ ಮಹದುಪಕಾರ ಮಾಡಿದ್ದಾರೆ. ಆಚಾರ್ಯರಿಂದ ಉದ್ಭವಿಸಿದ ಗ್ರಂಥಗಳಲ್ಲಿ ವ್ಯಕ್ತವಾದ ತಮ್ಮ ಮತಗಳ ಖಂಡನೆಯನ್ನು ಪ್ರತಿಭಟಿಸಿದ ವಾದಿಗಳಿಗೆ ಅಲೌಕಿಕತೇಜಸ್ಸಂಪನ್ನರೂ ಅದ್ಭುತ ತರ್ಕಪ್ರವೀಣರೂ ಆದ ಶ್ರೀಮದಾಚಾರ್ಯರು ಅಖಂಡ ವಿಜಯ ಸಂಪಾದನೆ ಮಾಡುತ್ತ ಪಾದಾಕ್ರಾಂತರಾದ ಶಿಷ್ಯರಿಗೆ ವೈಷ್ಣವದೀಕ್ಷೆಯನ್ನು ಪ್ರಸಾದಿಸಿ ಅನುಗ್ರಹಿಸುತ್ತಾ ಕಾಲ್ನಡಿಗೆಯಿಂದಲೇ ಸಂಚರಿಸಿ ತಾವು ಸಂಚರಿಸಿದ ಸ್ಥಳಗಳನ್ನೆಲ್ಲಾ ಪಾವನಗೊಳಿಸಿದರು. ಅವರ ಈ ದೇಶ ಸಂಚಾರದಲ್ಲೂ ಅವರಿಂದ ಪರಾಜಿತರಾದ ಪರಮಶೀಲರು ವಿದ್ವಾಂಸರು ಶ್ರೀಪದ್ಮನಾಭ ತೀರ್ಥರು, ಶ್ರೀ ನರಹರಿ ತೀರ್ಥರು, ಶ್ರೀ ಮಾಧವತೀರ್ಥರು. ಶ್ರೀ ಅಕ್ಷೋಭ್ಯತೀರ್ಥರು ಎಂಬ ಹೆಸರುಗಳಿಂದ ಅವರಿಗೆ ಶಿಷ್ಯೋತ್ತಮರಾಗಿ ವೈಷ್ಣವ ದೀಕ್ಷಾ ಸ್ವೀಕಾರ ಮಾಡಿದರು. ಅಲ್ಲದೆ ಅವರ ಸಂಗಡ ಹದಿನೈದು ದಿನಗಳ ಕಾಲವಾದ ಮಾಡಿ ಪರಾಜಿತರಾದ ತ್ರಿವಿಕ್ರಮ ಪಂಡಿತಾಚಾರ್ಯರೇ ಮುಂತಾದವರೂ ಇನ್ನೂ ಅನೇಕ ಗೃಹಸ್ಥರೂ ಅವರ ಶಿಷ್ಯ ಮಂಡಲಿಯಲ್ಲಿ ವೈಷ್ಣವ ದೀಕ್ಷಾ ಸಂಪನ್ನರಾದರು. ಹೀಗೆ ದಿನದಿನಕ್ಕೆ ವೃದ್ಧಿಗೊಳ್ಳುತ್ತಿದ್ದ ಶಿಷ್ಯ ಪರಂಪರೆಯಿಂದ ಹರಿಭಕ್ತಿಯ ಪಂಥವು ಮುಂದುವರೆಯಿತು. ಶ್ರೀ ಮದಾನಂದತೀರ್ಥರೂ ಆ ಸೇತು ಹಿಮಾಚಲ ಸಂಚರಿಸಿ ದಿಗ್ವಿಜಯವನ್ನು ಪಡೆಯುತ್ತ, ತತ್ತ್ವೋಪದೇಶವನ್ನು ಬೀರುತ್ತ ವಿರಾಜಿಸಿದರು ಆಚಾರ್ಯರು ಕರ್ನಾಟಕದಲ್ಲಿ ಏಕೆ ಸಮಗ್ರ ಭಾರತದಲ್ಲಿ ಹೀಗೆ ಮುಕ್ತಿ ಫಲಪ್ರದವಾದ ಶ್ರೀ ಹರಿಭಕ್ತಿ ಕಲ್ಪತರುವನ್ನು ಪ್ರತಿಷ್ಠಿಸಿ, ಅಪೌರುಷೇಯ ವೇದಗಳೆಂಬ ಶೃತಿಸ್ಮೃತಿಗಳೆಂಬ ಅಮೃತಜಲವನ್ನು ಸಚ್ಛಾಸ್ತ್ರ ಪುರಾಣೇತಿಹಾಸಗಳೆಂಬ ಗೊಬ್ಬರ ಗೊಡಗಳನ್ನು ಅದಕ್ಕೆ ಒದಗಿಸಿ ಬೆಳೆಸಿದ ಆ ಮಹಾ ವೃಕ್ಷವನ್ನು ಅವರ ಶಿಷ್ಯ ಪ್ರಶಿಷ್ಯರು ಎಂಟುನೂರು ವರ್ಷಗಳಿಂದಲೂ ಕಾಪಾಡಿಕೊಂಡು ಬಂದಿದ್ದಾರೆ. ಸಹಸ್ರಾರು ವರ್ಷಗಳಕಾಲ ಈ ಮರ್ತ್ಯಲೋಕವಾಸಿಗಳಾದ ಸಜ್ಜನರಿಗೆ ದಿವ್ಯ ಫಲಗಳನ್ನಿತ್ತು ಅಮರ್ತ್ಯರನ್ನಾಗಿ ಮಾಡುವಂತೆ ರಕ್ಷಿಸಿಕೊಂಡು ಬರಲು ಕನ್ನಡನಾಡಿನ ಎಲ್ಲ ಸುಹೃದ್ ಬಾಂಧವರಿಗೂ ಶ್ರದ್ಧಾಭಕ್ತಿಗಳನ್ನು ಅನುಗ್ರಹಿಸಿ ಮುಖ್ಯಪ್ರಾಣರ ಅವತಾರಿಗಳಾದ

ಶ್ರೀಮಧ್ವಾಚಾರ್ಯರು ಕಾಪಾಡಲಿ! ಎಂದು ಪ್ರಾರ್ಥಿಸುತ್ತೇನೆ. ಅವರ ಗ್ರಂಥಗಳನ್ನು ವ್ಯಾಸಂಗಮಾಡಿ ಅವುಗಳಲ್ಲಿ ಅಡಕವಾಗಿರುವ ನೈಜ ತತ್ತ್ವಗಳನ್ನು ತಿಳಿದುಕೊಂಡು ಅವುಗಳಂತೆ ನಡೆಯಲು ಪ್ರಯತ್ನಿಸಿ ನಾವೆಲ್ಲರೂ ಕೃತಕೃತ್ಯರಾಗುವಾ! ಇತಿಶಮ್ ‖

‖ ಭೂಯಿಷ್ಠಾಂತೆ ನಮಉಕ್ತಿಂ ವಿಧೇಮ ‖

× × × × × × × ×

# ಪುರಂದರ ದಾಸರ ಪುಣ್ಯ ಜೀವನ

( ೪ ನೇಯ ಪುಟದಿಂದ ಬಂದದ್ದು )

ನಗರವ ಪ್ರಯಾಣವನ್ನು ಬೆಳಸಿದರು. ಅಲ್ಲಿ ತುಂಗಭದ್ರೆಯ ವಿಮಲಜಲ ಪ್ರವಾಹದಲ್ಲಿ ಮಿಂದು ಶುಚಿರ್ಭೂತರಾಗಿ ವಿನೀತಭಾವದಿಂದ ಶ್ರೀವ್ಯಾಸರಾಯರ ದರ್ಶನಕ್ಕೆ ಹೋದರು. ಆ ಸಮಯದಲಿ " ವ್ಯಾಸರಾಯರ ಚರಣಕಮಲ ದರ್ಶನವೆ ನನಗೆ ಏನು ಜನ್ಮದ ಸುಕೃತವೊ ದೊರಕಿತು; ಎನ್ನ ಸಾಸಿರ ಕುಲಕೋಟಿ ಪಾವನವಾಯಿತು. ಗುರು ವ್ಯಾಸರಾಯರೇ ಕರುಣದಿಂದೆನಗೆ ವರಮಹಾಮಂತ್ರಗಳ ಉಪದೇಶಿಸಿದರು ಪುರಂದರ ವಿಠಲನೆ ಪರನೆಂದರುಹಿ ದುರಿತ ಭಯವೆಲ್ಲ ಪರಿಹರಿಸಿದರು. " ಮತ್ತು ಅಂಕಿತವಿಲ್ಲದೆ ಇರಬಾರದು. ಎಂದು " ಪುರಂದರ ವಿಠಲನ ಅಂಕಿತವೆನಗಿತ್ತ ವ್ಯಾಸಮುನಿರಾಯ " ಎಂದು ನುಡಿದರು.

ಇಲ್ಲಿಗೆ ಪುರಂದರ ದಾಸರ ಪುಣ್ಯ ಜೀವನದ ಪೂರ್ವಾರ್ಧವು ಮುಕ್ತಾಯಗೊಳ್ಳುವದು.

( ಮುಂದುವರಿವುಯುದು )

.... .... .... .... ....

# ಕಲ್ಯಾಣದ ಚಾಲುಕ್ಯ ಹಾಗೂ ಕಲಚೂರಿ ಅರಸರ ಕಾಲದ ಕುಕನೂರು

ವಿ. ಶ್ರೀ ಕುಲಕರ್ಣಿ ಎಂ. ಎ., ಬಿ. ಇಡಿ

**ಸಾಮಾಜಿಕ ಜೀವನ—**

ಹಿಂದೆ ತಿಳಿಸಿದಂತೆ ಕುಕನೂರಿನಲ್ಲಿ ಸಮಾಜದ ನಾಲ್ಕು ವರ್ಣದ ಜನರು ವಾಸ ಮಾಡುತ್ತಿದ್ದರು. ಅವರಲ್ಲಿ ಪರಸ್ಪರ ಸೌಹಾರ್ದಭಾವನೆ ಇದ್ದಿತು. ಸಮಾಜದಲ್ಲಿ ಬ್ರಾಹ್ಮಣರಿಗೆ ಶ್ರೇಷ್ಠವಾದ ಸ್ಥಾನವಿದ್ದಿತು. ಇಲ್ಲಿಯ ಅಗ್ರಹಾರದಲ್ಲಿ ನೆಲೆಸಿದ ಒಂದುಸಾವಿರ ದ್ವಿಜರು ವೇದಾಧ್ಯಯನ ನಿರತರಾಗಿದ್ದರು. ಅವರಲ್ಲಿ ಅನೇಕರು ಒಂದು ಅಥವಾ ಅದಕ್ಕಿಂತ ಹೆಚ್ಚು ಶಾಸ್ತ್ರಗಳನ್ನು ಬಲ್ಲವರಾಗಿದ್ದರು. ಸಾಮಾನ್ಯವಾಗಿ ಇವರೆಲ್ಲರೂ ಶೈವ ಸಂಪ್ರದಾಯ ಬ್ರಹ್ಮಣರಾಗಿದ್ದಂತೆ ತೋರುತ್ತದೆ. ಇವರು ಶಿವಭಕ್ತರಾಗಿದ್ದರು. ಅನೇಕ ಮಹಾಜನರು, ರಾಜಪ್ರತಿನಿಧಿಗಳು, ದಂಡನಾಯಕರು ಹಾಕಿಕೊಟ್ಟ ಉಂಬಳಿಯಿಂದ ಇವರ ಜೀವನ ಸಾಗುತ್ತಿದ್ದಿತು. ಅನೇಕ ಮಹನೀಯರು ಚಿಕ್ಕಪುಟ್ಟ ಅನ್ನಸತ್ರವನ್ನು ಇಟ್ಟಿದ್ದರು. ಅಲ್ಲಿ ಹಲವಾರು ಬ್ರಾಹ್ಮಣರಿಗೆ ಊಟದ ಏರ್ಪಾಡು ನಡೆಯುತ್ತಿತ್ತು. ಹಲವಾರು ಸ್ತ್ರೀಯರು ಧರ್ಮದಿಂದ ಪ್ರೇರಿತರಾಗಿ ದಾನಕಾರ್ಯದಲ್ಲಿ ನೆರವಾಗುತ್ತಿದ್ದರು. ಇ. ಸ. ೧೧೦೭ರಲ್ಲಿ ಆಳುತ್ತಿದ್ದ ಕಲ್ಯಾಣದ ಚಾಲುಕ್ಯಮನೆತನದ ರಾಜನಾದ ಆರನೆಯ ವಿಕ್ರಮಾದಿತ್ಯನ ಕಾಲದ ಕೂಕನೂರಿನ ಶಾಸನದಲ್ಲಿ ಗಂಗಾಧರಯ್ಯ ನಾಯಕರ ಮಗಳು ' ಕಾಮಿಯಕ್ಕ ' ಎಂಬವಳು ಹಾಗೂ ಅವರ ಅಣ್ಣನಾದ ಶ್ರೀಪತಿನಾಯಕನ ಹೆಂಡತಿ ' ಚಾಮಿಕಬ್ಬೆ ' ಎಂಬವಳು ಅಲ್ಲಿಯ ಮೂಲಸ್ಥಾನ ದೇವರಿಗೆ, ಭೂಮಿಯನ್ನು ದಾನವಾಗಿ ಕೊಟ್ಟಳು. ಕುಕನೂರಿನ ದೇವಾಲಯಗಳಲ್ಲಿ ಅಂದಿನ ಕಾಲದಲ್ಲಿ ಸಂಗೀತಕಾರ್ಯ ಕಲಾಪವು ನಡೆಯುತ್ತಿತ್ತು. ಆದುದರಿಂದ ಹಾಡುಗಾರರೂ ವಿಪುಲ ಪ್ರಮಾಣದಲ್ಲಿ ಅಲ್ಲಿದ್ದರು. ದೇವರ ಪೂಜಾರಿಗಳು, ಪರಿಕಾರರು, ದೇವರ ಪೂಜೆಗಾಗಿ ಹೂದೋಟವನ್ನು ನಿರ್ಮಿಸಿ ಹೂಗಳನ್ನು ಮಾರುವ ಹೂಗಾರರು ಅಲ್ಲಿದ್ದರು. ಅವರಿಗೆ ಹಲವಾರು ಮಹನೀಯರು ಭೂದಾನವನ್ನು ಹಾಕಿಕೊಟ್ಟಿದ್ದರು. ಊರಿನ ಪೂರ್ವದಿಕ್ಕಿಗೆ ಇಂಥ ಒಂದು ಹೂದೋಟ ವಿದ್ದಿತು ಊರಿನ ಕೆಲವು ಪ್ರತಿಷ್ಠಿತ ಬ್ರಾಹ್ಮಣರು ಮೂಲಸ್ಥಾನ ದೇವರಿಗೆ ತಮ್ಮ ಗದ್ದೆಗಳನ್ನು ದಾನವಾಗಿ ಕೊಟ್ಟಿದ್ದರು. ಅಂಗಡಿಯ ಬಾಚಮಯ್ಯ ನಾಯಕನೆಂಬವನು ಸಹ ಈ ದೇವರಿಗೆ ದಾನವನ್ನು ಕೊಟ್ಟಿದ್ದನು. ಇಲ್ಲಿ ಅನೇಕ ಶಿಲ್ಪಿಗಳಿದ್ದರು. ಅವರು ಅಲ್ಲಿಯ ಕಲಾಪೂರ್ಣವಾದ ಮಂದಿರಗಳನ್ನು ಕಟ್ಟಿ ತಮ್ಮ ಕಲೆಯ ಹಿರಿಮೆಯನ್ನು ಮೆರೆದರು. ಅವರಲ್ಲಿ ಕೆಲವರು ಶಿಲಾಲಿಪಿಗಳನ್ನು

ಕೊರೆಯುತ್ತಿದ್ದರು. ಚನ್ನೋಜನ ಮಗನಾದ ದಾಮೋಜನೆಂಬವನು ಉಲ್ಲೇಖನೀಯ ವಾಗಿದ್ದಾನೆ. ಇವಲ್ಲದೆ ಕುಕನೂರಿನಲ್ಲಿ ಸೇನಬೋವರು ಇದ್ದರು. ದೇವಿಯ ಗುಡಿಯ ಮುಂದೆ ಹಾಗೂ ಇತರ ಮಂಗಲಕಾರ್ಯ ಪ್ರಸಂಗಗಳಲ್ಲಿ ಬಾರಿಸುವದಕ್ಕಾಗಿ 'ಬಾಜಂತ್ರಿ'ಯವರಿದ್ದರು. ಮೂಲಸ್ಥಾನದೇವರ ಸೂಳೆವಳಗದವರೂ ಅಲ್ಲಿದ್ದರು. ಅಸ್ಪೃಶ್ಯರ ಹೆಸರುಗಳು ಶಿಲಾಲೇಖಗಳಲ್ಲಿ ಉಲ್ಲೇಖಿತವಾಗಿರದಿದ್ದರೂ ಅವರು ಅಲ್ಲಿ ಇದ್ದರೆಂದು ಊಹಿಸಿದರೆ ತಪ್ಪಾಗಲಿಕ್ಕಿಲ್ಲ.

ಈ ರೀತಿಯಾಗಿ ಕುಕನೂರಿನಲ್ಲಿ ಸಮಾಜದ ಅನೇಕ ವರ್ಗದವರು ವಾಸಿಸುತ್ತಿದ್ದರು. ಕುಂಬಾರರು, ಕಂಬಾರರು, ನೇಕಾರರು, ಅಕ್ಕಸಾಲಿಗರು, ಬಡಿಗರು ಮುಂತಾದವರ ಉಲ್ಲೇಖವು ಶಿಲಾಲೇಖಗಳಲ್ಲಿ ಬರದಿದ್ದರೂ ಅವರು ಅಲ್ಲಿ ಇದ್ದರೆಂದು ಹೇಳಬಹುದು. ಕಾರಣ ಜನಸಾಮಾನ್ಯರು ಒಕ್ಕಲಿಗರಾಗಿದ್ದರು. ಅವರಿಗೆ ಒಕ್ಕಲುತನಕ್ಕಾಗಿ ಅನೇಕ ವಸ್ತುಗಳ ಅವಶ್ಯಕತೆ ಬೀಳುತ್ತಿತ್ತು. ಅವೆಲ್ಲವುಗಳನ್ನು ಮೇಲ್ಕಂಡ ವ್ಯವಸಾಯಗಾರರು ಒದಗಿಸಿಕೊಡುತ್ತಿದ್ದರು. ಕುಕನೂರ ಸುತ್ತಲೂ ಅನೇಕ ತೋಟಗಳು, ಹೊಲಗಳು ಗದ್ದೆಗಳು ಇದ್ದುದರಿಂದ ಈ ಒಕ್ಕಲಿಗರು ಅಲ್ಲಿ ಸಾಗುವಳಿಯನ್ನು ಮಾಡುತ್ತಿದ್ದರು. ಶಾಸನಗಳಲ್ಲಿ ಅನೇಕ ಹೊಲಗಳ ಹಾಗೂ ಗದ್ದೆಗಳ ಉಲ್ಲೇಖ ಇರುತ್ತದೆ. ಸಾಮಾನ್ಯವಾಗಿ ಅವೆಲ್ಲವನ್ನು ಹಾಗೂ ಅಗ್ರಹಾರದ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟ ಹೊಲಗಳನ್ನುಸಹ ಈ ಒಕ್ಕಲಿಗರೇ ಸಾಗುಮಾಡುತ್ತಿದ್ದರೆಂದು ಹೇಳಬಹುದು.

## ಕುಕನೂರಿನ ವಿದ್ಯಾವಂತರು—

ಕುಕನೂರು ಮಹಾಗ್ರಹಾರವಾಗಿತ್ತೆಂದು ಹಿಂದೆಯೇ ತಿಳಿಸಲಾಗಿದೆ. ಈ ಅಗ್ರಹಾರವು ವೈದಿಕ ಸಂಸ್ಕೃತಿಯ ವಿದ್ಯಾಕೇಂದ್ರವಾಗಿದ್ದುದರಿಂದ ಇಲ್ಲಿ ನಾನಾ ಶಾಸ್ತ್ರಗಳನ್ನು ಕಲಿಸುವ [illegible] ಇತ್ತು. ಇಲ್ಲಿಯ ಅನೇಕ ಬ್ರಾಹ್ಮಣರು ವೇದಾಧ್ಯಯನ ಮಾಡಿದವರಾಗಿದ್ದರು. ಕೆಲವು ಪಂಡಿತರು ಶಾಸ್ತ್ರಾರ್ಥದಲ್ಲಿ ಬಹಳ ನಿಪುಣರಿದ್ದರು. ಹಲವರು ಅನೇಕ ಪಂಡಿತರನ್ನು ವಾದದಲ್ಲಿ ಜಯಿಸಿ ಅವರಿಂದ ಜಯಪತ್ರಗಳನ್ನು ಪಡೆದಿದ್ದರು. ಅವರಿಗೆ 'ವಾದಿಕೋಲಾಹಳ' ಮುಂತಾದ ಬಿರುದುಗಳಿದ್ದವು. ಇಂತಹ ವಾದಿ ಕೋಲಾಹಳರಾದ 'ಮಹಾದೇವ ಭಟ್ಟೋಪಾಧ್ಯಾಯ'ರೆಂಬವರ ಹೆಸರು ಶಿಲಾಲೇಖದಲ್ಲಿ ಉಲ್ಲೇಖಿತವಾಗಿದೆ. ಸೋಮೇಶ್ವರ ಭಟ್ಟೋಪಾಧ್ಯಾಯರೆಂಬವರು ವೇದಾಂತ ಪಂಡಿತರಾಗಿದ್ದರು.

ವೈದಿಕ ಬ್ರಾಹ್ಮಣರಂತೆ ಕಾಳಾಮುಖ ಪಂಥದ ಆಚಾರ್ಯರೂ ಸಹ ತಮ್ಮ ಶಾಸ್ತ್ರದಲ್ಲಿ ಪಂಡಿತರಾಗಿದ್ದರು. ಆ ಕಾಲದಲ್ಲಿ ದೇಶದ ನಾನಾ ಭಾಗಗಳಲ್ಲಿ ಕಾಳಾಮುಖ ಪಂಥದ ಮಠಗಳಿದ್ದವು. ಅನೇಕ ಮಂದಿರಗಳ ಪೂಜಾಕಾರ್ಯವನ್ನು ನೆರವೇರಿಸುವವರೂ ಹಾಗು ಅವುಗಳ ಮೇಲ್ವಿಚಾರಕರೂ ಅವರಾಗಿದ್ದರು ಅವರೆಲ್ಲ ನಿಷ್ಠಾವಂತ ಶೈವರಾಗಿದ್ದರು. ಕಾಳಾಮುಖ ಪಂಥಕ್ಕೆ ಲಕುಲೀಶ ಪಂಥವೆಂಬ ಹೆಸರೂ ಇದೆ. ತತ್ಕಾಲೀನ ಸಮಾಜದಮೇಲೆ ಅವರು ತಮ್ಮ ಪ್ರಭಾವವನ್ನು ಬೀರಿದ್ದರು. ಶಾಸನಗಳಲ್ಲಿ ಹಲವಾರು ಶೈವಾಚಾರ್ಯರ ಉಲ್ಲೇಖ ಬಂದಿದೆ. ಕುಕನೂರಿನಲ್ಲಿ ಈ ಪಂಥದ ಹಲವಾರು ಮಠಗಳಿದ್ದವು. ಅವುಗಳಲ್ಲಿ 'ಪೊಸಮಠದ ಚೋಳ ಪಂಡಿತರಗಸ್ತ್ಯಜೀಯ'ರೆಂಬವರು, ತಪಸ್ವಿಗಳಾಗಿದ್ದರು. ಅದರಂತೆ ಸೂಂಡಿಯ ನಗರೇಶ್ವರದ ಆಚಾರ್ಯರು ತಮ್ಮ ಜ್ಞಾನದಲ್ಲಿ ಬಲ್ಲಿದರಾಗಿದ್ದರು. ಕಾಳೇಶ್ವರ ಪಂಡಿತರೆಂಬುವರು ಕಳಚುರಿ ಸಂಕಮದೇವನ ಕಾಲದಲ್ಲಿ ಬಹಳ ಪ್ರಸಿದ್ಧರಾಗಿದ್ದರು. ( ಇ. ಸ. ೧೧೭೯ ) ಇವರ ಗುರು ಪರಂಪರೆಯು ಬಹಳ ಪ್ರಾಚೀನ ಕಾಲದಿಂದ ನಡೆದುಕೊಂಡು ಬಂದಿತ್ತು. ಅವರು ಯೋಗೇಶ್ವರ ದೇವರಾಜ ಎಂಬವರ ಶಿಷ್ಯರಾಗಿದ್ದರು. ಹಾಗು ರಾಜಗುರುಗಳ ಮರ್ಯಾದೆಯನ್ನು ಪಡೆದಿದ್ದರು. ಶಾಂತ ಸ್ವಭಾವದವರೂ, ಶೈವ ಸಿದ್ಧಾಂತವನ್ನು ಬಲ್ಲವರೂ ಆದ ಕಾಳೇಶ್ವರ ಪಂಡಿತರ ಕೀರ್ತಿ ಎಲ್ಲೆಡೆಗೆ ಹಬ್ಬಿತ್ತು. ಇವರು ಮಾಂತ್ರಿಕರು, ತಾಂತ್ರಿಕರು, ಯಾಂತ್ರಿಕರು, ಆಗಿದ್ದರು. ಇವಲ್ಲದೆ ಇವರು ಶಬ್ದಜ್ಞರು, ಶಾಸ್ತ್ರಜ್ಞರು, ತರ್ಕ, ಕಾವ್ಯ, ಮುಂತಾದ ವಿಷಯಗಳನ್ನು ಬಲ್ಲವರಾಗಿದ್ದರು. ಒಟ್ಟಿನಲ್ಲಿ ಯೋಗಸಾಮರ್ಥ್ಯವನ್ನು ಪಡೆದ ಸಿದ್ಧರಾಗಿದ್ದರು. ಇವರು ಕುಕನೂರಿನ ಮಹಾಮಾಯಾ ಅಥವಾ ಜ್ಯೇಷ್ಠಾ ದೇವಿಯ ಅರ್ಚಕರೆಂದು ನೇಮಿಸಲ್ಪಟ್ಟಿದ್ದರು.

ಕಾಳಾಮುಖ ಸಂಘದ ಪಂಡಿತರ ಜೊತೆಗೆ ಅಗ್ರಹಾರದಲ್ಲಿ ಅನೇಕ ವಿದ್ಯಾವಂತರಾದ ಬ್ರಾಹ್ಮಣರಿದ್ದರು. ಶಿಲಾಲೇಖಗಳಲ್ಲಿ ಅನೇಕ ಬ್ರಾಹ್ಮಣರ ಹೆಸರುಗಳು ಬಂದಿವೆ. ಅವರಲ್ಲಿ ಅನೇಕರು ಭೂದಾನವನ್ನು ಪಡೆದು ತಮ್ಮ ಜೀವನವನ್ನು ಸಾಗಿಸುತ್ತಿದ್ದರು. ಕೆಂಗಿನ ಮಾಧವದೇವರು, ಕಳಸವಳ್ಳಿಯ ನಾರಾಯಣ ಭಟ್ಟೋಪಾಧ್ಯಾಯರು, ಕಾಶಿವಾಸ ದೀಕ್ಷಿತರು, ಪುರುಷೋತ್ತಮ ಭಟ್ಟ ಸೋಮಯಾಜಿಯರು, ನಾರಾಯಣ ವ್ಯಾಸರು, ಪಟವರ್ಧನ ಆದಿತ್ಯ ವ್ಯಾಸರು, ಜೆಣ್ಣೆಯ ಮಾಧವ ಭಟ್ಟರು, ಮೊದಲಾದವರ ಹೆಸರುಗಳನ್ನು ಉಲ್ಲೇಖಿಸಬಹುದು.

**ಆಡಳಿತದ ಅಧಿಕಾರಿಗಳು—**

ಬೆಳುವಲ ನಾಡಿಗೆ ಸೇರಿದ ಕುಕನೂರು ಗ್ರಾಮಕ್ಕೆ ನಾಡಿನ ಅನೇಕ ಹಿರಿಯ

ಅಧಿಕಾರಿಗಳು, ತಮ್ಮ ಕೆಲಸಕ್ಕಾಗಿ ಆಗಾಗ್ಗ ಇಲ್ಲಿಗೆ ಬಂದು ಹೋಗುತ್ತಿದ್ದರು. ರಾಜ ಪ್ರತಿನಿಧಿಗಳು ತಮ್ಮ ಪ್ರವಾಸದ ಕಾಲದಲ್ಲಿ ಇಲ್ಲಿಗೆ ಬಂದು ಇಳಿಯುತ್ತಿದ್ದರು. ಕಲ ಕೆಲವು ಅಧಿಕಾರಿಗಳು ಇಲ್ಲಿಯ ದೇವಸ್ಥಾನಗಳಿಗೆ ದಾನ ಧರ್ಮಾದಿಗಳನ್ನು ಮಾಡು ತ್ತಿದ್ದರು. ಅಗ್ರಹಾರದ ವೈದಿಕರಿಗೆ ಉದಾರವಾದ ಆಶ್ರಯವನ್ನು ಕೊಡುತ್ತಿದ್ದರು. ಶಾಸನಗಳಲ್ಲಿ ಇಂಥ ಅನೇಕ ಅಧಿಕಾರಿಗಳ ಉಲ್ಲೇಖಗಳನ್ನು ಕಾಣಬಹುದು. ಸಾಮಾನ್ಯವಾಗಿ ಈ ಅಧಿಕಾರಿಗಳನ್ನು ರಾಜರು ನೇಮಿಸುತ್ತಿದ್ದರು. ಅವರನ್ನು ರಾಜರು ಆಗಾಗ್ಗೆ ಬೇರೆಬೇರೆ ಸ್ಥಳಗಳಿಗೆ ವರ್ಗಾಯಿಸುತ್ತಿದ್ದ

ಕಲ್ಯಾಣದ ಚಾಲುಕ್ಯ ಮನೆತನದ ಎಂಡನೆಯ ಜಗದೇಕ ಮಲ್ಲದೇವನ ಕಾಲ ದಲ್ಲಿ (ಇ. ಸ. ೧೧೩೮-೧೧೫೧) ಬೆಳ್ವೊಲ ನಾಡನ್ನು ಕೇಶಿಮಯ್ಯ ದಂಡಾಧೀಶನ ದೆಸೆಯಿಂ ಮುಂಮುರಸ ದಂಡಾಧಿನಾಥನು' ಆಳುತ್ತಿದ್ದನು. ಆತನ ಸುಂಕದ ಅಧಿಕಾರಿ ಯಾದ ಮೇದಿರಾಜ ದಂಡನಾಯಕನೆಂಬವನಿದ್ದನು. ಈ ಕಾಲದಲ್ಲಿ ಕುಕನೂರಿನಲ್ಲಿ ಸೈನ್ಯದ 'ಠಾಣ್ಯ' ವಿದ್ದಿತೆಂದು ತಿಳಿದು ಬರುವದು. ಮೇದಿರಾಜನು ಮಲ್ಲಿಕಾರ್ಜುನ ದೇವರ ನಂದಾದೀವಿಗೆ, ಹಾಗು ನೈವೇದ್ಯಕ್ಕೆಂದು ದಾನಮಾಡಿದನು.

ಕಲಚುರಿ ಮನೆತನದ ಬಿಜ್ಜಳ ರಾಜನ ಕಾಲದಲ್ಲಿ (ಇ.ಸ.೧೧೬೪) ಕುಕನೂರು ಮೂವತ್ತರಲ್ಲಿ ಮಹಾಪ್ರಧಾನ ದಂಡನಾಯಕ ಬಲದೇವಯ್ಯ ಎಂಬವನು 'ಪಲವುಂ ಬಾಡಂಗಳಧಿಕಾರಿ' ಯಾಗಿದ್ದನು. ಬೆಳುವೊಲನಾಡನ್ನು 'ಮಹಾಪ್ರಧಾನ ಸೇನಾಧಿ ಪತಿ' 'ಅಮ್ಮಣಯ್ಯ'ನೆಂಬುವನು ಬಿಜ್ಜಳ ರಾಜನ ಪ್ರತಿನಿಧಿಯಾಗಿ ಆಳುತ್ತಿದ್ದನು. ಈತನು ತನ್ನ ರಾಜನ ಅನುಮತಿಯನ್ನು ಪಡೆದುಕೊಂಡು ಕುಕನೂರ ಮೂವತ್ತ ರೊಳಗಿನ ಧನಕನಕ ಸಂಪತ್ತಿಯಿಂದ 'ಎಡೆಹಳ್ಳಿ' ಎಂಬ ಹಳ್ಳಿಯನ್ನು ಶ್ರೀ ಮಲ್ಲಿ ಕಾರ್ಜುನ ದೇವರ ಪೂಜೆ ಹಾಗು ಬ್ರಹ್ಮಪುರಿಯ ಬ್ರಾಹ್ಮಣರ ಉಪಜೀವನಕ್ಕಾಗಿ ದಾನಮಾಡಿದನು.

ಇ. ಸ. ೧೧೭೦ ರಲ್ಲಿ ಕಲಚುರಿ ಮನೆತನದ ರಾಯ ಮುರಾರಿ ಸೋವಿದೇವ ಎಂಬವನು 'ಮಾದೆಗನೂರ' ಎಂಬ ಊರಲ್ಲಿ ರಾಜ್ಯನಾಳುತ್ತಿದ್ದನು. ಈತನ ಕಾಲದಲ್ಲಿ ಬೆಳ್ವೊಲನಾಡು 'ಬಾಹತ್ತರ ನಿಯೋಗಾಧಿಪತಿ, ಮಹಾಪ್ರಚಂಡ ದಂಡನಾಯಕ ತೇಜಿರಾಜ' ನೆಂಬವನ ಅಧಿಕಾರದಲ್ಲಿದ್ದಿತು. ಈತನು ಇ. ಸ.೧೧೭೦ ರಲ್ಲಿ ಕುಕನೂರಿಗೆ ಬಂದಿದ್ದನು. ಅನೇಕ ಪಂಡಿತರಿಗೆ ಆಶ್ರಯವನ್ನು ಕೊಟ್ಟ ಈತನು ವೈರಿಗಳನ್ನು ಬಸ ಬಡೆಯಲು ಸಮರ್ಥನಾಗಿದ್ದನು.

ತೇಜಿರಾಜನ ಜೊತೆಗೆ ಕಲಚುರಿ ರಾಜನ ಮಂತ್ರಿಗಳು ಹಾಗೂ ಬೆಳ್ವೊಲನಾಡಿನ ಹಿರಿಯ ಅಧಿಕಾರಿಗಳೂ ಕುಕನೂರಿಗೆ ಬಂದಿದ್ದರು. ತೇಜಿರಾಜನ ಮೈದುನನು, ಚಮೂಪತಿ ತಿಳಕನೂ ವಿವೇಕಸಿಧಿಯಾದ ತೇಜಿಮಯ್ಯನು ಆತನ ಜೊತೆಗಿದ್ದನು. ಕಲಚುರಿ ರಾಜ್ಯದ ಕರಣಪಿತಾಮಹನೂ ಪ್ರಧಾನಮಂತ್ರಿ ಹಾಗೂ ದ್ವಿಜವಂಶಾಭರಣ ನೆನಿಸಿದ ಬೊಪ್ಪಣನಾಯಕನೆಂಬುವನು ಶ್ರೀಕರಣದ ಮಹಾದೇವ ನಾಯಕನು ಸೋವಿದೇವ ಭೂಪನ ಉನ್ನತ ಸಚಿವನಾದ ಗೊಲ್ಲಣ ಪಂಡಿತನು ಶ್ರೀಕರಣದ ಮಧುವಯ್ಯ ರಾಯಮುರಾರಿ ಸೋವಿದೇವನ ಪ್ರೀತಿಯ ಸಚಿವನಾದ 'ಪಡಪವಳರೊಡೆಯನಾದ ಬಂಮ್ಮದೇವನು ಮುಂತಾದ ರಾಜ್ಯದ ಹಿರಿಯ ಅಧಿಕಾರಿಗಳು ಕುಕನೂರಿಗೆ ಬಂದಿದ್ದರು. ಅದಲ್ಲದೆ ಬೆಳ್ವೊಲನಾಡಿನ ಹಿರಿಯ ಅಧಿಕಾರಿಗಳು ಅಲ್ಲಿಗೆ ಬಂದಿದ್ದರು. ಅವರಲ್ಲಿ ಆದಿತ್ಯನಾಯಕ, ರತ್ನನಾಯಕ, ಮಹಾದೇವನಾಯಕ, ಗೊಲ್ಲಣ ಪಂಡಿತನ ಆಪ್ತಮಂತ್ರಿಯಾದ ನರಸಿಂಗನಾಯಕ, ಹರಭಕ್ತಿಯುತನಾದ ದಾಸಿರಾಜನು ಗುಣವಂತನಾದ ನಾಚಿಮಯನಾಯಕ ಮುಂತಾದವರು ತೇಜಿರಾಜನ ಜೊತೆಗಿದ್ದರು. ಬೆಳ್ವೊಲ ನಾಡವಧಿಕಾರಿಯಾದ ತೇಜಿರಾಜನು ಕುಕನೂರ ಮಲ್ಲಿಕಾರ್ಜುನ ದೇವರಿಗೆ ಪೂಜೆಯನ್ನು ಸಲ್ಲಿಸಿ, ರಾಯಮುರಾರಿ ಸೋವಿದೇವರಸರ ಅಪ್ಪಣೆಯನ್ನು ಪಡೆದುಕುಕನೂರು ಮೂವತ್ತರಲ್ಲಿ ಧನಧ್ಯಾನದಿಂದ ಸಮೃದ್ಧಿಯಾದ ಹಾಡಲಗೆರೆಯನ್ನು ದಾನವಾಗಿಕೊಟ್ಟನು.

ಇ.ಸ. ೧೧೭೭ರಲ್ಲಿ ಕಲಚುರಿ ಮನೆತನದ ರುಕಮದೇವನು ಮೊದಗನೂರಿನಲ್ಲಿ ರಾಜ್ಯವಾಳುತ್ತಿದ್ದನು. ಈತನ ಕಾಲದಲ್ಲಿ ಬೆಳ್ವೊಲನಾಡಿನ ಅಧಿಕಾರಿಯಾದ 'ಮಹಾಪ್ರಧಾನ ಧಂಸುಗಿ ದಂಡನಾಯಕ'ನೆಂಬುವನು ಕುಕನೂರಿಗೆ ತನ್ನ ತಾಯಿಯಾದ ಚಂಡಬಾಯಿ ಹಾಗೂ ಅಕ್ಕ ಲಳಿಯಾದೇವಿಯಿಂದ ಕೂಡಿಕೊಂಡು ಬಂದಿದ್ದನು. ಈತನು ಸಹವಾಸಿ ಕುಲದವನೂ ಕಾಶ್ಮೀರ ಮುಖಂಡನೂ ಆಗಿದ್ದನು. ಕುಕನೂರಿನ ಜೇಷ್ಠಾದೇವಿಯ ಮೇಲೆ ಈತನಿಗೆ ಅಪಾರವಾದ ಭಕ್ತಿ ಇದ್ದಿತು. ಆತನ ಅಭೀಷ್ಟವನ್ನು ಈ ದೇವಿಯು ಪೂರೈಸಿದ್ದಳು. ಅದಕ್ಕಾಗಿ ಆತನು ಸೋವಿದೇವರಸರ ಅಪ್ಪಣೆಯನ್ನು ಪಡೆದುಕೊಂಡು ಕುಕನೂರ ಮೂವತ್ತರ ಬಳಿಯ ಬಾಡವಪ್ಪ ಸೆಲಗರವನದ ರೊಳನಾದಿಯಿಂ ಪ್ರವಿಷ್ಟವಾಗಿರ್ದ ಚಿತನೂರ ಹಾಳ್ವೆರಸು ಪಾರಮೇಶ್ವರ ದತ್ತಿಯಾಗೆ ಪಡೆದು ಜೇಷ್ಠಾದೇವಿಯ ಮಂದಿರಕ್ಕೆ ದಾನವಾಗಿ ಕೊಟ್ಟನು.

★★

# ಆತ್ಮ ನಿರೀಕ್ಷೆ

ಮೂವತ್ತು ಮೇಲೆ ಒಂಬತ್ತು ಬರಿಸ ಕಳೆದೇ ಹೋಯ್ತು;
ಸಾಧಿಸಿದುದೇನುಂಟು ಈಸುಕಾಲ ?
ಮರಹುಟ್ಟಿ ಮರಬೀಳ್ವ ತೆರನಾಯ್ತು ಎಂಬೊಂದು
ಸಹಜ ಶಂಕೆಯು ಬಹುದು ಇದುವೆ ಜಾಲ !

ಹಿಂದಣಾ ಮಹನೀಯನಾಚಾರ್ಯ ಶಂಕರನು
ಬಾಳಿದ್ದು ಕೇವಲದಿ ಮೂವತ್ತು ಮೇಲೆರಡೆ;
ಹಿಮಶೈಲದಿಂ ಪಿಡಿದು ಆಸೇತು ಕೊನೆವರೆಗೆ
ಸಂಚರಿಸಿ ಮಾಡಿದ್ದು ಒಂದೆ–ಎರಡೆ !!

ಮರ್ತ್ಯದಾಮಣಿಹವನು ಕರ್ತವ್ಯವೆಂದರಿದು
ಮಾಡಿ ಮುಗಿಸಿದ ಬಸವ ನಿಜ ಮಾನವ !
ಜಗದಗಲ ತತ್ತ್ವವನು ಹರಡಿ ಸೇರಿದನವನು
ಮೂವತ್ತು ಆರರೊಳೆ ಶಿವಸಾದನ !!

ಡೇರೆಯೊಳಗಿದ್ದು ತಾ ಡೇರೆಯನೆ ಕೆಡೆವಂತೆ
ಅಂತರಂಗದೊಳಿರುವ ಅರಿವರ್ಗವು
ಮೇಲಿಂದ ಮೇಲೆ ಅವು ಕೊಡುತಿರುವ ಉಪಟಳವ
ಮಾಣಿಸಿದರದುವೆ ಮಹದಪ ವರ್ಗವು !

ಗುರುಗಳಾಶೀರ್ವಾದ ಹಿರಿಯರಾಮಿಕ್ಕೊಲವು
ಆಪ್ತರಾಸಹಕಾರ-ಜ್ಞಾನದಾಹ !
ಕೈಪಿಡಿದು ನಡೆಸುತಿವೆ ಧಾರಿದೀಪದ ವೋಲು
ಇಷ್ಟೆಲ್ಲದರ ಜೊತೆಗೆ ಮಿತ್ರ ಸಂದೋಹ !!

ಕೃತುಶಕ್ತಿ ಚೇತರಿಪ ಕವಿವರರು ದಯಮಾಡಿ,
ಋಷಿಯಂಶ ವಿಲ್ಲದವ ಕವಿಯುಹನೆ ತಾನು-
ಆತ್ಮ ಪರಿಶೋಧನೆಗೆ ತೊಡಗಿರುವ ಅವಸರದಿ
ಹರಸಿರೀಯಣುಗನನು : ಬೇಡುವೆನು ನಾನು ||

[illegible]

# ಸಂಪಾದಕೀಯ

## ಕವಿಕುಲ ಶ್ರೇಷ್ಠರಿಗೆ ನಮ್ಮ ಹಾರ್ದಿಕ ನಮನಗಳು

ಈ ತಲೆಮಾರಿನ ಕವಿಪುಂಗವರಲ್ಲಿ ಮುದ್ದಣ ಒಬ್ಬ ಶ್ರೇಷ್ಠ ಕವಿ. ಹಳೆಯ ಮತ್ತು ಹೊಸಕಾಲದ ಸುವರ್ಣ ರೇಖೆಯಮೇಲೆ ರಾರಾಜಿಸುವ ಪ್ರತಿಭಾಸೂರ್ಯ! ಆತನ ಜೀವನ ಮತ್ತು ವೃತ್ತಿಗೂ, ಕಾವ್ಯಸಾಧನೆಗೂ ಭೂಮ್ಯಾಕಾಶದಷ್ಟು ಅಂತರ. ಅಂಗಸಾಧನೆಯ ಶಿಕ್ಷಕ ( ವ್ಯಾಯಾಮ ಶಿಕ್ಷಕ ) ಕವಿಯಾಗಬಹುದೆಂಬ ಕನಸನ್ನು ನಾಡಿನ ಯಾವ ರಸಿಕನೂ ಕಂಡಿರಲಿಕ್ಕಿಲ್ಲ. ದೇವರು ಯಾವ ಅದ್ಭುತ ಶಕ್ತಿ ಯಾರಲ್ಲಿ ಅಡಗಿಸಿರುತ್ತಾನೆಂಬುದು ಹೇಳಲಿಕ್ಕಾಗದು. ಕಡುಬಡತನದಲ್ಲಿ ಬೆಳೆದವರಿಗೆ ಮೇಧಾಶಕ್ತಿ ತೀರ ಕಡಿಮೆ ಎಂಬ ಮಾತು ವಾಡಿಕೆಯಲ್ಲಿದೆ. ಆದರೆ ಈತನಲ್ಲಿ ಎಲ್ಲವೂ ವಿಪರ್ಯಾಸ. ಅಂತೆಯೇ ಆತ ತಾನು ಬರೆದದ್ದನ್ನೂ ತಾನೇ ಬರೆದುದೆಂದು ಹೇಳಿಕೊಳ್ಳಲು ನಾಚಿಕೊಂಡಿರಬೇಕು, ಇಲ್ಲವೆ ಸಂದೇಹ ಪಟ್ಟಿರಬೇಕು. ಇಲ್ಲದೇ ಹೋದಲ್ಲಿ ತಾಯಿಯ ಹೆಸರಿನ ಮೇಲೆ, ಗುಪ್ತನಾಮದ ಮೇಲೆ ತನ್ನ ಲೇಖನಗಳನ್ನೂ, ಕೃತಿಗಳನ್ನೂ ಪ್ರಕಟಿಸುತ್ತಿರಲಿಲ್ಲ.

ಆತನ ಸಮಕಾಲೀನ ಕವಿಗಳಲ್ಲಿ ಪಂಜೆ ಮಂಗೇಶರಾಯರೂ ಒಬ್ಬರು. ಪಂಜೆಯವರು ಒಳ್ಳೆಯ ವಿದ್ವಾಂಸರು, ನುರಿತ ಸಾಹಿತ್ಯಿಕರು ಅಂಥವರ ಲೆಕ್ಕಣಿಕೆಯಿಂದಲೂ ಮುದ್ದಣ ಬರೆದಂತಹ ಅದ್ಭುತ ಕೃತಿಗಳು ಹೊರಬರಲಿಲ್ಲ. ಅಂದಮೇಲೆ ಮುದ್ದಣ ಸಾಹಿತ್ಯ ಸಾಮ್ರಾಟನಾಗಿ ಹುಟ್ಟುವುದಕ್ಕೆ ಪರಮಾತ್ಮನ ಇಚ್ಛಾಶಕ್ತಿಯೂ ಕಾರಣವಾಗಿರಬೇಕು.

ಕವಿಯು ತನ್ನ ಕೊನೆಯುಸಿರು ಎಳೆಯುವಾಗ ಆತನ ಧರ್ಮಪತ್ನಿ ಸನಿಹದಲ್ಲಿರಲಿಲ್ಲ. ತನ್ನ ಈ ಕಡುಕಷ್ಟದ, ನೋವಿನ ಅರಿವು ಅವರಿಗೆ ಆಗಬಾರದೆಂದು ಆತನ ಇಚ್ಛೆ. ವ್ಯಾಯಾಮ ಶಿಕ್ಷಕನಂತಹ ಅಂಗಸೌಷ್ಟವವುಳ್ಳ ದೃಢಕಾಯನಿಗೂ ಕ್ಷಯರೋಗ ತಗುಲಬೇಕೆಂದರೆ ಇದೂ ಒಂದು ವಿಪರ್ಯಾಸ. ವಿವಿಧ ವಿಪರ್ಯಾಸಗಳ ಮಧ್ಯದಲ್ಲಿಯೇ ಜೀವಿಸಿ, ಜೀವನಕ್ಕಾಗಿ ಅಲ್ಲ, ಸಾಹಿತ್ಯಸೃಷ್ಟಿಗಾಗಿ ಹೋರಾಡಿ, ನವೆದು, ಮೂಲೆಗುಂಪಾಗಿ ಅಳಿದಮೇಲೂ ಉಳಿದಿರುವ ಈ ಕವಿಧನ್ಯ! ಜಗನ್ಮಾನ್ಯ! ಇಂಥ ಕವಿಪುಂಗವರು ನಾಡಿನ ಪುಣ್ಯದಿಂದ ಪುನಃ ಉದಿಸಿಬರಲೆಂಬುದೇ ನಮ್ಮ ಹಾರೈಕೆ.

—O—

ಕನ್ನಡನಾಡಿನ ಘನವಿದ್ವಾಂಸರ ಶ್ರೇಷ್ಠ ಸಾರ್ವಜನಿಕ ಕಾರ್ಯಕರ್ತರ, ಸುರಿತ ಲೇಖಕರ ಮತ್ತು ಪ್ರತಿಭಾನ್ವಿತ ಕವಿಗಳ ಸಾಲಿನಲ್ಲಿ ಜೇದೀಪ್ಯಮಾನವಾಗಿ ಬೆಳಗುವ ಧ್ರುವತಾರೆಯಂತಿದ್ದಾರೆ ನಮ್ಮ 'ಮಂಕುತಿಮ್ಮ'ರು. ತಾವು ಮಂಕುತಿಮ್ಮರಲ್ಲ, ಅವರ ಸಾಹಿತ್ಯದ ಸವಿಯನ್ನುಂಡವರಿಗೇ ಮಂಕು ಹಿಡಿಸಿ ಬಿಟ್ಟಿದ್ದಾರೆ. ಅವರು ಸಂಸ್ಕೃತಿ ಯಂತಹ ಕಿರುಹೊತ್ತಿಗೆಯೇ ಬರೆದಿರಲಿ ಭಗವದ್ಗೀತೆಯಂತಹ ಗಂಭೀರ ವಿಷಯದ ಮೇಲೆಯೇ ಲೆಕ್ಕಣಿಕೆ ಓಡಿಸಿರಲಿ. 'ಪುರುಷ ಸೂಕ್ತ' ದಂತಹ ಗಹನ ವಿಷಯವನ್ನೇ ವಿವೇಚಿಸಿರಲಿ, ಎಲ್ಲದರಲ್ಲೂ ಅದೇ ತೂಕ, ಅದೇ ಗಾಂಭೀರ್ಯ ಅದೇ ಪ್ರಾವೀಣ್ಯತೆ ಸಾಲು ಸಾಲಿಗೂ ಎದ್ದು ಕಾಣುತ್ತದೆ. ಯಾವ ವಿಷಯವನ್ನು ಕುರಿತೇ ಬರೆಯಲಿ, ಅದರ ಆಳವನ್ನು ಶೋಧಿಸಿ ಮಥಿಸಿ ಅದರಿಂದ ಹೊರಟ ನವನೀತವನ್ನೇ ನಮಗೆ ಉಣಬಡಿಸುತ್ತಾರೆ. ಇಂಥ ಚಿಂತನಶೀಲರೂ, ಅಭ್ಯಾಸ ಜೀವಿಗಳೂ, ಸಂಯಮ ಪೂರ್ಣರೂ ಆದ ಕವಿಗಳು ನಮ್ಮ ನಾಡಿನಲ್ಲಿ ಹುಟ್ಟಿ ನಾಡಿನ ಕೀರ್ತಿಯನ್ನು ಬೆಳಗು ತ್ತಿದ್ದುದು ನಮ್ಮೆಲ್ಲರ ಭಾಗ್ಯ !

'ಮಂಕು ತಿಮ್ಮನಕಗ್ಗ' ದಂತಹ ಅದ್ವಿತೀಯ ಕಾವ್ಯವನ್ನು ರಚಿಸಿದ ನಮ್ಮ ಡಿ.ವಿ.ಜಿ (ಡಿ.ವಿ. ಗುಂಡಪ್ಪನವರು) ನಮ್ಮವರಷ್ಟೇ ಅಲ್ಲ-ಭಾರತೀಯರು. ಕೇವಲ ಭಾರ ತೀಯರಷ್ಟೇ ಅಲ್ಲ ವಿಶ್ವಮಾನವರು. ಅವರ ಈ ಒಂದು ಕೃತಿ ವಿಶ್ವದ ಹಿರಿಯ ಕವಿಗಳ ಕೃತಿಗಳ ಸಾಲಿನಲ್ಲಿ ನಿಲ್ಲತಕ್ಕದ್ದು. ಗೋಖಲೆ ಸಾರ್ವಜನಿಕ ಸಂಸ್ಥೆಯ ಮೂಲಕ ಅವರ ಸಮಾಜಸೇವೆ ಮಂಕು ತಿಮ್ಮನಕಗ್ಗ ಮುಂತಾದ ಇನ್ನೂ ಅನೇಕ ಉಪಯುಕ್ತ ಕೃತಿಗಳ ಮೂಲಕ ಅವರ ಸಾಹಿತ್ಯಸೇವೆ ಬಹುಕಾಲಬಾಳಿ ಇತರರಿಗೆ ದಾರಿದೀಪವಾಗು ವುದರಲ್ಲಿ ಆಶ್ಚರ್ಯವಿಲ್ಲ ! ಸರಕಾರದ ಜನತೆಯ ಗೌರವ ಪುರಸ್ಕಾರಗಳು, ಬಿರುದು ಬಾವ ಲಿಗಳು ಅವರಿಗೆ ಭೂಷಣವಲ್ಲ. ನಾಡಿನ ಜನಪ್ರೇಮಕ್ಕೇ ಭೂಷಣಗಳು ! ಇನ್ನೂ ನೂರುಕಾಲ ಈ ಕವಿ ಬದುಕಿ ಬಾಳಲಿ! ನಮ್ಮೆಲ್ಲರಿಗೂ ಸ್ಫೂರ್ತಿಯ ಸೆಲೆಯಾಗಿರಲಿ!

**ನಮೋ ನಮಃ ಕವಿಕುಲ ಶ್ರೇಷ್ಠಾ ! !**

## ಕನ್ನಡ ಸಾಹಿತ್ಯ ಪರಿಷತ್ತಿನ ಯೋಜನೆಗಳು

ಕನ್ನಡ ಸಾಹಿತ್ಯ ಪರಿಷತ್ತು ಕ್ರಿಯಾಶೀಲ ಯೋಜನೆಯೊಂದನ್ನು ಹಾಕಿ ಕೊಂಡು ಅದರ ಕಾರ್ಯಾಚರಣೆಗೆ ತೊಡಗಿರುವುದು ಸಂತೋಷದ ಸಂಗತಿ. ಅತ್ಯಂತ ಉತ್ಸಾ ಹಶಾಲಿಗಳೂ, ಹಿಡಿದ ಕೆಲಸವನ್ನು ಬಿಡದೆ ಯಶಸ್ವಿಯಾಗಿ ನಡೆಸಿಕೊಂಡು ಬರುವ ದಿಟ್ಟತನವನ್ನು ತೋರುತ್ತಿರುವ ವ್ಯಕ್ತಿಶೀಲರೂ ಆದ ಶ್ರೀ. ಜಿ. ನಾರಾಯಣ ಅವರು ಪರಿಷತ್ತಿನ ಅಧ್ಯಕ್ಷರಾಗಿ ದೊರಕಿರುವುದು ಒಂದು ವಿಶೇಷ. ಅವರು ಶ್ರೇಷ್ಠ ಸಾಹಿತಿಗ

ಕಾಗಿರಲಿಕ್ಕಿಲ್ಲ. ಆದರೂ ಅವರು ಶ್ರೇಷ್ಠ ಸಾಹಿತ್ಯಾಭಿಮಾನಿಗಳು. ಅವರ ಆಶ್ರಯದಲ್ಲಿ ಸಾಹಿತ್ಯ ಪರಿಷತ್ತಿಗೆ ದೃಷ್ಟಿದೋಶ ತಗಲದು. ದುರಾಡಳಿತದ ಜಾಡ್ಯ ಅಂಟಲಾರದು ಎಂದು ಬಗೆದಿದ್ದೇವೆ. ಇಂದು ಯಾವ ಸ್ಥಾನದಲ್ಲಿ ಯಾರೇ ಇರಲಿ, ಅವರ ಮೇಲೆ ಸ್ವಾರ್ಥ-ಸ್ವಜನ ಪಕ್ಷಪಾತ ಮುಂತಾದ ಆರೋಪಗಳು ಬಂದು ಬಿಡುತ್ತವೆ. ಅದಕ್ಕೆ ಆಸ್ಪದಕೊಡದಂತೆ ಆಡಳಿತವನ್ನು ನಡೆಸಿಕೊಂಡು ಹೋಗುವುದೇ ಜಾಣತನ ! ಅದರ ಲ್ಲಿಯೂ ಸಾಹಿತ್ಯಪರಿಷತ್ತು ಸರಸತಿಯ ಸುವರ್ಣಮಂದಿರ. ಇಲ್ಲಿ ಯಾವ ಒಂದು ನ್ಯೂನಜೊತೆಗೂ ಆಸ್ಪದವಿರಬಾರದು.ದೇವಮಾನವರಂತಹ ಕವಿಗಳೂ,ಸಾಹಿತಿಗಳೂ ಇಲ್ಲಿ ಸ್ವಚ್ಛಂದವಾಗಿ ವಿಹರಿಸುವಂತಿರಬೇಕು. ಪಂಪಮಹಾಕವಿ ಹೇಳಿದ ಹಾಗೆ-ಇಲ್ಲಿ ಪ್ರತಿಯೊಬ್ಬ ಸಾಹಿತ್ಯಿಕನಿಗೂ, ಕವಿಯಾಗಿಯೋ, ಲೇಖಕನಾಗಿಯೋ, ಹುಟ್ಟದೇ ಹೋದರೂ, ಆ ಪರಿಷನ್ಮಂದಿರದ ಆವರಣದಲ್ಲಿದ್ದ ಉದ್ಯಾನದಲ್ಲಿ ಮರಿದುಂಬಿಯಾಗಿ ಯಾಗಲಿ ಇಲ್ಲವೆ ಕೋಗಿಲೆಯಾಗಿಯಾಗಲಿ ಹುಟ್ಟುವ ಆಶೆ ಹುಟ್ಟಬೇಕು.ಅಂದಾಗ ಆ ಪರಿಷನ್ಮಂದಿರ ನಿಜವಾಗಿಯೂ ಸರಸ್ವತೀ ಸದನವಾದೀತು !

## ಜಿಲ್ಲಾ ಸಾಹಿತ್ಯ ಪರಿಷತ್ತುಗಳ ಕಾರ್ಯ

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರು ತಮ್ಮ ಗೌರವ ಕಾರ್ಯದರ್ಶಿಗಳಾದ ಶ್ರೀ ಕಂಪನಾಗರಾಜಯ್ಯ ಮತ್ತು ಶ್ರೇಷ್ಠ ಸಾಹಿತಿ ಶ್ರೀ ರಂ. ಶ್ರೀ ಮುಗಳಿ ಅವರೊಡನೆ ಕಲಬುರ್ಗಿಗೆ ಆಗಮಿಸಿ ಜಿಲ್ಲಾ ಸಾಹಿತ್ಯಪರಿಷತ್ತನ್ನು ರಚಿಸಿದುದು ತಿಳಿದು ಅತ್ಯಾನಂದವೆನಿಸಿತು. ಆ ಪರಿಷತ್ತಿನ ಕಾರ್ಯ ಸಮಿತಿಯಲ್ಲಿ ಕೇವಲ ಸಾಹಿತ್ಯಕರಿಗೇ ಗೌರವದ ಸ್ಥಾನ ದೊರಕ್ಕಿದ್ದಲ್ಲಿ ನಾವದನ್ನು ಹೃತ್ಪೂರ್ವಕ ಸ್ವಾಗತಿಸುತ್ತೇವೆ. ಅಲ್ಲಿಯೂ ಇಂದಿನ ಕಲುಷಿತ ರಾಜಕಾರಣ ಹೊಕ್ಕಿದ್ದರೆ ಮಾತ್ರ ನಾವದನ್ನು ಪ್ರತಿಭಟಿಸುತ್ತೇವೆ. ರಾಜಕೀಯರಂಗದಲ್ಲಿ ರಾಜಕಾರಣಿಗಳಿಗೆ, ಶೈಕ್ಷಣಿಕ ರಂಗದಲ್ಲಿ ಶಿಕ್ಷಣತಜ್ಞರಿಗೆ, ಆರ್ಥಿಕ ರಂಗದಲ್ಲಿ ಆರ್ಥಿಕತಜ್ಞರಿಗೆ ಸದವಕಾಶದೊರಕುವಂತೆ ಸಾಹಿತ್ಯರಂಗದಲ್ಲಿ ಸಾಹಿತ್ಯಿಕರಿಗೇ ಅಗ್ರತಾಂಬೂಲವಿರಬೇಕು. ಏಕೆಂದರೆ ಈಗಾಗಲೇ ನಾವು ಅಖಿಲ ಕರ್ನಾಟಸಾಹಿತ್ಯ ಪರಿಷತ್ತಿನಲ್ಲಿಯೇ ಇದರ ಕಟು ಅನುಭವವನ್ನು ಪಡೆದಿದ್ದೇವೆ. ಅದರ ಪುನರಾವರ್ತನೆ ಜಿಲ್ಲಾ ಪರಿಷತ್ತುಗಳಲ್ಲಿಯೂ ಆಗುವಂತಾಗಬಾರದು. ಈ ನಡುವೆ ಕನ್ನಡ ಸಾಹಿತ್ಯಪರಿಷತ್ತು ' ರಾಜಕೀಯ ಆಖಾಡಾ ' ಆದಂತಾಗಿತ್ತು. ವ್ಯಾಜ್ಯ ಕೋರ್ಟನ್ನೂ ತಲುಪಿತು. ಇದು ಯಾವ ಸಾಹಿತಿಗೂ ಭೂಷಣವಲ್ಲ. ವಾತಾವರಣ ಕಲುಷಿತವಾಗಿದೆಯೆಂಬ ಸಂದೇಹಕ್ಕಾಸ್ಪದವಾದರೆ ಪ್ರತಿಸ್ಪರ್ಧೆಗೆ ನಿಲ್ಲುವುದಕ್ಕಿಂತ ಕಾರ್ಯಸಂನ್ಯಾಸವನ್ನು ಹೊಂದಬೇಕು. ದೂಷಿತ ವಾತಾವರಣ ಪರಿಶುಭ್ರವಾಗುವವರೆಗೂ ಕಾಯಬೇಕು. ಇಲ್ಲವೆ ಅಂಥ ಒಳ್ಳೆಯ

ವಾತಾವರಣ ಹುಟ್ಟಿಸುವಲ್ಲಿ ಶ್ರಮಿಸಬೇಕು. ಅದನ್ನು ಬಿಟ್ಟು ಆ ವಾತಾವರಣವನ್ನು ಕದಡಿ ಇನ್ನಷ್ಟು ಕಲುಷಿತಗೊಳಿಸುವುದು ಯಾವ ಸಾಹಿತಿಗೂ ಶೋಭೆ ತರಲಾರದು. ಅಖಿಲ ಕರ್ನಾಟಕ ಸಾಹಿತ್ಯ ಪರಿಷತ್ತಿನಲ್ಲಿ ಅಹರ್ನಿಶಿ ದುಡಿದು ಅದನ್ನು ಪವಿತ್ರತಮ ಮಂದಿರವನ್ನಾಗಿ ಮಾಡಿ, ಅದರ ಹೆಸರನ್ನು ಸ್ಮರಿಸಿದ ಮಾತ್ರಕ್ಕೇ ತಲೆಬಾಗಿ ವಂದಿಸುವಂತಹ ಯೋಗ್ಯವಾತಾವರಣವನ್ನು ನಿರ್ಮಿಸಿ, ತಾವೇ ಪರಿಷತ್ತು, ಪರಿಷತ್ತೇ ತಾವು ಎಂದುಕೊಂಡು ನಿಸ್ಪೃಹ, ನಿಃಸಂಕೋಚ ಮತ್ತು ನಿಸ್ವಾರ್ಥ ಭಾವನೆಯಿಂದ ದುಡಿದ ಹಿರಿಯ ಸಾಹಿತಿಗಳೂ ಕೆಲಕಾಲ ಅದರಿಂದ ದೂರ ಸರಿದು ನಿಲ್ಲಲಿಲ್ಲವೆ? ನಮಗೆ ಇದೊಂದು ಬೋಧಪ್ರದವಾದ ಪಾಠದಂತಿರಬೇಕು.

ಇನ್ನು ಜಿಲ್ಲಾ ಸಾಹಿತ್ಯಪರಿಷತ್ತುಗಳು ಕೆಲಮುಖ್ಯಕಾರ್ಯಗಳತ್ತ ತಮ್ಮ ದೃಷ್ಟಿಯನ್ನು ಹೊರಳಿಸಬೇಕಾಗಿದೆ.

(೧) ಪ್ರತಿಯೊಂದು ಜಿಲ್ಲೆಯ ಜಿಲ್ಲಾಪರಿಷತ್ತು ತನ್ನ ಜಿಲ್ಲೆಯಲ್ಲಿದ್ದ ಪ್ರತಿಯೊಂದು ತಾಲೂಕಿನಲ್ಲಿಯೂ ತಾಲೂಕಾ ಸಾಹಿತ್ಯ ಪರಿಷತ್ತನ್ನು ರಚಿಸಬೇಕು. ಆ ಪರಿಷತ್ತು ಆ ತಾಲೂಕಿನಲ್ಲಿಯ ಸಾಹಿತಿಗಳಿಂದಲೇ ಕೂಡಿರಬೇಕು; ಮತ್ತು ಆ ತಾಲೂಕಿನಲ್ಲಿದ್ದ ಎಲ್ಲ ಸಾಹಿತ್ಯಿಕ ಸಂಘ ಸಂಸ್ಥೆಗಳು ಅದರ ಅಂಗ ಸಂಸ್ಥೆಗಳಾಗಿರಬೇಕು.

(೨) ಪ್ರತಿಯೊಂದು ಜಿಲ್ಲೆಯ ಸಾಹಿತ್ಯಪರಿಷತ್ತು ತನ್ನ ಜಿಲ್ಲೆಯಲ್ಲಿದ್ದ ಸಾಹಿತ್ಯಿಕರ (ಲೇಖಕರ-ಕವಿಗಳ, ಸಂಶೋಧಕರ) ಒಂದು ಕೈಪಿಡಿಯನ್ನು ಸಾಧ್ಯವಾದಷ್ಟು ಬೇಗ ಸಿದ್ಧಪಡಿಸಿಕೊಳ್ಳಬೇಕು. ಆ ಎಲ್ಲ ಕೈಪಿಡಿಗಳ ಸಹಾಯದಿಂದ ಅಖಿಲ ಕರ್ನಾಟಕದ ಸಾಹಿತ್ಯ ಪರಿಷತ್ತು ತನ್ನದೊಂದು ಬೃಹತ್ ಸಂಪುಟವನ್ನು ಪರಿಷತ್ತಿನ ಗೌರವಕ್ಕೆ ತಕ್ಕದಾಗಿರುವಂತೆ ಪ್ರಕಟಿಸಬೇಕು.

(೩) ಪ್ರತಿಯೊಂದು ಜಿಲ್ಲೆಯಲ್ಲಿಯೂ ಪ್ರತಿವರ್ಷ, ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನ ಜರುಗುವುದಕ್ಕಿಂತ ಪೂರ್ವದಲ್ಲಿ, ಜಿಲ್ಲಾಸಾಹಿತ್ಯ ಸಮ್ಮೇಳನಗಳನ್ನು ಏರ್ಪಡಿಸಿಕೊಳ್ಳಬೇಕು. ಮತ್ತು ಆ ಸಮ್ಮೇಳನದ ಅಧ್ಯಕ್ಷಸ್ಥಾನ ಅದೇ ಜಿಲ್ಲೆಯ ಸಾಹಿತಿಗೆ ದೊರಕಬೇಕು.

ಅಖಿಲ ಕರ್ನಾಟಕ ಸಾಹಿತ್ಯ ಪರಿಷತ್ತಿನ ನೆರವಿನಿಂದ ಜಿಲ್ಲಾ ಪರಿಷತ್ತುಗಳು ಜಿಲ್ಲಾ ಪರಿಷತ್ತಿನ ನೆರವಿನಿಂದ ತಾಲೂಕಾ ಪರಿಷತ್ತುಗಳೂ, ತಮ್ಮ ಭಾಗದಲ್ಲಿಯ ಸಾಹಿತ್ಯಿಕ ಸಂಘಗಳ ಮುಖಾಂತರವಾಗಲಿ ಪ್ರತ್ಯೇಕವಾಗಿಯೇ ಆಗಲಿ,ವಿವಿಧ ಸಾಹಿತ್ಯಿಕ ಕಾರ್ಯಕ್ರಮಗಳನ್ನು ಕಾಲಕಾಲಕ್ಕೆ ಏರ್ಪಡಿಸುತ್ತ ಹೋಗಬೇಕು. ಅಂದಾಗ ಮಾತ್ರ ಸಾಹಿತ್ಯದ ನಂದಾದೀಪ ಮನೆ ಮನೆಗೂ ಬೆಳಗಿ ತೊಳಗುವುದು!

ಸಿರಿಗನ್ನಡಂ ಗೆಲ್ಗೆ

# ಶ್ರೇಷ್ಠ ಮೇಧಾವಿಯ ಕಣ್ಮರೆ

ಬ್ರಿಟನ್ನಿನ ಸುರಿತ ರಾಜಕಾರಣಿ, ವಿಶ್ವ ವಿಖ್ಯಾತ ಶಾಂತಿವಾದಿ. ಪ್ರತಿಭಾ ಸಂಪನ್ನಲೇಖಕ, ಗಣಿತ ಶಾಸ್ತ್ರಜ್ಞ ಮತ್ತು ಹಿರಿಯ ತತ್ತ್ವ ಜ್ಞಾನಿಯಾದ ಲಾರ್ಡ ಬರ್ಟ್ರಾಂಡ ರಸೆಲ್ಲ ಅವರು ತಮ್ಮ ೯೭ ವರುಷಗಳ ತುಂಬು ಜೀವನವನ್ನು ಪೂರ್ತಿಗೊಳಿಸಿ, ಇನ್‌ಫ್ಲುಯೆಂಝಾದಿಂದ ಮೃತ್ಯುವಿನ ಕರಾಳ ದವಡೆಯಲ್ಲಿ ಸಿಕ್ಕುದು ದೇವರ ಅದಾವ ಅಭಿಶಾಪವೊ ?

ಬಹು ಮುಖ ವ್ಯಕ್ತಿತ್ವದಿಂದ ಕೂಡಿದ ಅವರ ಜೀವನ ಒಂದು ಸಮಸ್ಯಾತ್ಮಕ ಜೀವನ. ಜಗತ್ತಿನಾದ್ಯಂತ ಅವರನ್ನು ಮೆಚ್ಚಿಕೊಂಡವರೂ ಅಷ್ಟೆ. ತೆಗಳಿ ನುಡಿದವರೂ ಅಷ್ಟೇ! ಅಮೇರಿಕನ್ನರಂತೂ ಅವರಿಗೆ ತುಂಬ ವಿರೋಧಿಗಳಾಗಿದ್ದರು. ೧೯೪೮ ರಲ್ಲಿ ಅವರು ಬಿ. ಬಿ. ಸಿ ಮೂಲಕ ಇತ್ತ ಉಪನ್ಯಾಸಗಳಿಗೆ ಅಮೇರಿಕನ್ನರು, 'ತೋಳದ ಚೀರಾಟ' ವೆಂಬ ಪ್ರಶಸ್ತಿಯನ್ನಿತ್ತಿದ್ದರಂತೆ.: ಮಾಸ್ಕೊ ರೇಡಿಯೋ ಕೂಡ ಇದಕ್ಕೆ ಪುಷ್ಟಿಯನ್ನಿತ್ತಿತ್ತು. ಆದರೆ ಈ ಬಂಟ ಇಂಥ ಯಾವ ಬೆದರಿಕೆಗೂ, ತಾತ್ಸಾರಕ್ಕೂ ಅಂಜಲಿಲ್ಲ.

ನಾಮಾಂಕಿತ ಗಣಿತ ಶಾಸ್ತ್ರಜ್ಞರಾದ ಅವರು ೧೯೧೦ ರಲ್ಲಿ ಪ್ರಿನ್ಸಿಪಿಯಾ ಮೆಥೆಮೆಟಿಕ' ಎಂಬ ಗ್ರಂಥವನ್ನು ಬರೆದರು. ಈ ಗ್ರಂಥ ಅವರ ತೀಕ್ಷ್ಣ ಹಾಗೂ ಹರಿತವಾದ ಬುದ್ಧಿವಂತಿಕೆಯನ್ನಷ್ಟೇ ಪ್ರದರ್ಶಿಸುವುದಿಲ್ಲ. ಆ ವಿಷಯವನ್ನು ಕುರಿತು ಅವರು ಮಾಡಿದ ಅಭ್ಯಾಸದ ಆಳವನ್ನೂ ಪ್ರದರ್ಶಿಸುತ್ತದೆ. ಅವರು ಮೊದಲನೆಯ ಜಾಗತಿಕ ಯುದ್ಧಕ್ಕೆ ತಮ್ಮ ವಿರೋಧವನ್ನು ವ್ಯಕ್ತಪಡಿಸಿದಾಗ ಸೆರೆಮನೆ ವಾಸಮಾಡಬೇಕಾಯಿತು. ಆ ಸದವಕಾಶವನ್ನು ಬಳಸಿಕೊಂಡು, ಇಂಟ್ರೊಡಕ್‌ಶನ್ ಟು ಮೆಥೆಮ್ಯಾಟಿಕಲ್ ಫಿಲಾಸಫಿ' ಎಂಬ ಅತ್ಯಂತ ಮಹತ್ವಪೂರ್ಣ ಗ್ರಂಥವನ್ನು ಬರೆದರು. ಅತರವಾಯ 'ಪ್ರಿನ್ಸಿಪಲ್ಸ ಆಫ್ ಫಿಲೊಸಫಿ' ಎಂಬ ಉದ್ಗ್ರಂಥವನ್ನು ೧೯೧೨ ರಲ್ಲಿ ಪ್ರಕಟಿಸಿದರು. ಸಾಮಾಜಿಕ ಮತ್ತು ಲೈಂಗಿಕ ಸಮಸ್ಯೆಗಳ ಬಗೆಗಿನ 'ಮ್ಯಾರೇಜ ಅ್ಯಂಡ ಮೊರಲ್ಸ' ಎಂಬ ಪುಸ್ತಕವಂತೂ ಕೋಲಾಹಲವನ್ನೇ ಎಬ್ಬಿಸಿತು. ೧೯೬೭ ರಿಂದ ಈಚೆಗೆ ಅವರ ಚರಿತ್ರೆಯ ಮೂರು ಸಂಪುಟಗಳು ಹೊರಬಿದ್ದವು.

ರಸೆಲ್ಲರು ಬಾಲ್ಯದಿಂದಲೂ ಆಗರ್ಭ ಶ್ರೀಮಂತರು. ತಾಯಿ ತಂದೆಗಳನ್ನು ಚಿಕ್ಕಂದಿನಲ್ಲಿಯೇ ಕಳೆದುಕೊಂಡರೂ ಅಜ್ಜ ಅಜ್ಜಿಯ ಆಶ್ರಯದಲ್ಲಿ ಬೆಳೆದರು. ನಾಲ್ಕು ಲಗ್ನಗಳನ್ನು ಮಾಡಿಕೊಂಡರು ಕೊನೆಯ ಲಗ್ನವಾದದ್ದು ಅವರ ಎಂಭತ್ತನೆ ವಯಸ್ಸಿನಲ್ಲಿ. ಈ ವೈವಾಹಿಕ ಜೀವನದೊಡನೆಯೇ ಗ್ರಂಥರಚನೆಯೂ ಸಾಗಿಯೇ ಇತ್ತು. ಅವರು ೪೦ ಕ್ಕಿಂತ ಹೆಚ್ಚು ಗ್ರಂಥಗಳನ್ನು ಬರೆದಿದ್ದಾರೆ.

ಭಾರತದ ಬಂಧುವಾಗಿದ್ದ ಇವರು ೧೮೭೨ ನೇ ಮೇ ೧೮ ರಂದು ಜನಿಸಿ ೩೦ ರ ಪ್ರಾಯದಲ್ಲಿ ಗಣಿತ ಶಾಸ್ತ್ರಜ್ಞರಾಗಿ, ೫೦ ರ ಪ್ರಾಯದಲ್ಲಿ ತತ್ತ್ವ ಜ್ಞಾನಿಯಾಗಿ, ೭೦ ರ ಪ್ರಾಯದಲ್ಲಿ ಶಾಂತಿದೂತರಾಗಿ, ನೋಬಲ್ ಪಾರಿತೋಷಕವನ್ನೂ ಪಡೆದು ೧೯೭೦ ರ ಫೆಬ್ರುವರಿ ೨ ಸೋಮವಾರ ದಂದು ಮಧ್ಯರಾತ್ರಿಯಲ್ಲಿ ನಮ್ಮನ್ನಗಲಿದರು. ಇಂಥ ಮೇಧಾವಿ ಇನ್ನೆಂದು ಹುಟ್ಟಿ ಬರುವನೊ? ಬಹೂನಾಂ ಜನ್ಮನಾಮಂತೆ ಜ್ಞಾನವಾನ್ ಮಾಂ ಪ್ರಪದ್ಯತೆ........'ಎಂಬ ಮಾತು ಮತ್ತೆ ಮತ್ತೆ ಸಾರ್ಥಕವಾಗಲಿ !

× × × × × × × ×

## ಶಹಪುರದ ಒಂದು ಕಣ್ಣು ಇಲ್ಲದಂತಾಯಿತು!

ಶಹಪುರದ ಗಣ್ಯ ನಾಗರಿಕರೂ, ಸುಪ್ರಸಿದ್ಧ ವ್ಯಾಪಾರಿಗಳೂ, ಬಡವರ ಬಂಧುಗಳೂ ಆಗಿದ್ದ ಶ್ರೀ ಆನೇಗುಂದಿ ಕಲ್ಲಪ್ಪನವರು ಪಾರ್ಶ್ವ ವಾಯುರೋಗದಿಂದ ದಿನಾಂಕ ೧೪-೨-೭೦ ಶನಿವಾರ ದಿವಸ ಶಿವೈಕ್ಯರಾದರೆಂದು ತಿಳಿಸಲು ಅತ್ಯಂತ ಖೇದವೆನಿಸುತ್ತದೆ. ಅವರು ತಮ್ಮ ಶುದ್ಧ ಚರಿತ್ರ, ಜನಾನುರಾಗ ಮತ್ತು ಪ್ರಾಮಾಣಿಕತೆಯಿಂದಾಗಿ ಹಂತ ಹಂತವಾಗಿ ಮೇಲೇರಿ ತಮ್ಮ ಜೀವಿತ ಕಾಲದಲ್ಲಿಯೇ ಆಗರ್ಭ ಶ್ರೀಮಂತರಾದರು. ಲಕ್ಷ್ಮಿ ಚಂಚಲೆಯಾದರೂ ಅದೇಕೋ ಅವರಲ್ಲಿ ಕಾಲುಕಟ್ಟಿಕೊಂಡು ಬಿದ್ದಿದ್ದಳು. ಅವರ ಪ್ರಾಮಾಣಿಕತೆಯೇ ಇದಕ್ಕೆ ಕಾರಣವಿರಬಹುದೆಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಅವರಿಗೆ ಗಂಡುಸಂತಾನ ವಿಲ್ಲದಿದ್ದರೂ ಜೀವನದಿಂದ ಜುಗುಪ್ಸೆ ಹೊಂದಿರಲಿಲ್ಲ. ಕಾಯಕವೇ ಕೈಲಾಸವೆಂದರಿತು ಜೀವನದುದ್ದಕ್ಕೂ ದುಡಿಮೆಯಲ್ಲಿ ನಿರತರಾಗಿದ್ದರು. ಅವರ ಕುಟುಂಬವರ್ಗದವರಿಗಂತೂ ತುಂಬಿ ಬಾರದ ಹಾನಿಯಾಗಿದೆಯೆಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಅವರನ್ನು ನಂಬಿಕೊಂಡು ನಡೆದ ಅನೇಕ ಬಡಬಗ್ಗರೂ ಅಸಹಾಯಕರಾಗಿದ್ದಾರೆ. ದೇವರು ಅವರ ಆತ್ಮಕ್ಕೆ ಶಾಂತಿಯನ್ನೀಯಲಿ ! ಅವರ ಕುಟುಂಬ ವರ್ಗಕ್ಕೆ ಶಾಂತಿ ದಯಪಾಲಿಸಲಿ! ಎಂದು ಕೇಳಿಕೊಳ್ಳದೇವಿಧಿಯಲ್ಲ.



ತಾ|| 1-2-1970 ರಿಂದ 1-3-1970 ರ ವರೆಗೆ.

# ★ ದ್ವಾದಶ ರಾಶಿ ಭವಿಷ್ಯ ★

ಲೇ|| ಬಾಳಶಾಸ್ತ್ರಿ ರಾಜಜೋಶಿ ದೋರನಹಳ್ಳಿ

**ಮೇಷ:—** ಈ ಮಾಸವು ನಿಮಗೆ ಕಳೆದ ತಿಂಗಳಗಿಂತಲೂ ಉತ್ತಮವಿವಾಗಿದೆ. ಕೈಕೊಂಡ ಕಾರ್ಯಗಳು ನಿರ್ವಿಘ್ನವಾಗಿ ನೆರವೇರುವವು. ಆರ್ಥಿಕ ಮುಗಟ್ಟಿನಿಂದ ಪಾರಾಗುವಿರಿ, ಆರೋಗ್ಯಕ್ಕೆ ತೊಂದರೆ ಇದೆ. ಪ್ರಯಾಣದಲ್ಲಿ ಅಪಘಾತ ಸಂಭವ,

**ವೃಷಭ:—** ಮಾಸಾದಿಯಲ್ಲಿ ಸ್ವಲ್ಪಕಷ್ಟಗಳು ಕಂಡುಬಂದರೂ ಕಡೆಯಲ್ಲಿ ಉತ್ತಮವಾಗುವದು ಗ್ರಹಕೃತ್ಯದಲ್ಲಿ ಅವ್ಯವಸ್ಥೆ ಮತ್ತು ಕಲಹ ಆಪ್ತೇಷ್ಟರ ವಿರಹ. ದುಃಖ ಆದರೂ ದಿನಯಾಪನೆ ಮಾತ್ರ ದುಸ್ತರವಾಗುವದಿಲ್ಲ. ಪ್ರವಾಸ ಕೆಟ್ಟದ್ದು.

**ಮಿಥುನ:—** ನೀವು ಈ ಮಾಸವನ್ನು ಬಹುಕಷ್ಟದಿಂದ ಕಳೆಯಬೇಕಾಗಿದೆ. ಮಾಸಾಂತದಲ್ಲಂತೂ ತುಂಬಾ ತೊಂದರೆಗೆ ಸಿಲುಕುವಿರಿ, ಶತ್ರುಗಳಿಂದ ಕಿರುಕುಳ ಗ್ರಹತಾಪತ್ರಯ ನಿಷ್ಕಾರಣ ವಾಕ್ಕಲಹ ಆಪ್ತೇಷ್ಟಅಸಹಕಾರ ಉದ್ಯೋಗದಲ್ಲಿ ನಷ್ಟ.

**ಕರ್ಕ:—** ನಿಮ್ಮ ಕೆಲಸ ಕಾರ್ಯಗಳು ನಿರಾಂತಕವಾಗಿ ಮುಂದುವರಿಯು ವವು. ಸಮಾಜದಲ್ಲಿ ಯಶಸ್ವಿನ ಯೋಗವಿದೆ. ನಷ್ಟಪದಾರ್ಥಗಳು ನಿಮ್ಮ ಕೈಸೇರಲಿವೆ. ಎಂತಹ ಮಾಹಾತ್ಕಾರ್ಯಗಳನ್ನಾದರೂ ಅನಾಯಾಸದಿಂದ ಕೊನೆಗಾಣಿಸುವಿರಿ.

**ಸಿಂಹ:—** ನಿಮಗೆ ದುರ್ದಿನಗಳು ದೂರಾದಾವು. ಪರಿಶ್ರಮಕ್ಕೆ ತಕ್ಕ ಫಲವು ಲಭಿಸಿ ದಿನಯಾಪನೆಯು ಸುಖಕರವಾಗುವದು. ಹಿಡಿದಕಾರ್ಯಕ್ಕೆ ವಿರೋಧ ಒದ ಗಿದರೂ ಪ್ರಯತ್ನದಿಂದ ಕೊನೆಗಾಣಿಸುವಿರಿ. ಆಪ್ತೇಷ್ಟರಿಂದ ಮನಸ್ತಾಪ.

**ಕನ್ಯಾ:—** ಈ ಮಾಸದಲ್ಲಿ ಗ್ರಹಗಳು ಪ್ರತಿಕೂಲವಾಗಿರುವದರಿಂದ ನಿಮ್ಮ ಉದ್ಯೋಗ ವ್ಯವಹಾರಗಳಿಗೆ ಅಡಿಚಣಿಗಳು ಉಂಟಾಗುವವು. ವ್ಯಾಪಾರಸ್ಥರಿಗೆ ಈ ಕಾಲವು ಅನುಕೂಲವಾಗಿರುವದಿಲ್ಲ. ಸ್ಥಾನಪಲ್ಲಟ, ಜನಾಪವಾದ, ಗ್ರಹಕಲಹ ಮತ್ತು ದೇಹಾಲಸ್ಯ.

**ತುಲಾ:** ವಿರೋಧಿವರ್ಗದವರ ಕಾಟವು ಪ್ರಬಲವಾಗಿದ್ದರೂ ಎಂತಹ ಮಾಹಾತ್ಕಾರ್ಯವನ್ನಾದರೂ ಸುಲಭವಾಗಿ ಕೊನೆಗಾಣಿಸುವಿರಿ. ಸಮಾಜದಲ್ಲಿ ಒಳ್ಳೆಯ ಸ್ಥಾನಮಾನವಿದೆ. ಮಾಸಾದಿಯಲ್ಲಿ ಶುಖಶಾಂತಿಗಳು ಕೊನೆಯಲ್ಲಿ ಅಷ್ಟಾಗಿರುವದಿಲ್ಲ

**ವೃಶ್ಚಿಕ**:- ನೀವು ಈ ಮಾಸದಲ್ಲಿ ಹಣದ ಬಿಕ್ಕಟ್ಟಿಗೆ ಸಿಲುಕುವಿರಿ ವಿರೋಧಿವರ್ಗದಿಂದ ಕೋರ್ಟುಕಚೇರಿಗಳಲ್ಲಿ ಪರಾಜಯವಾಗದೆ ಗ್ರಹದಲ್ಲಿ ಕಲಹ ಆರೋಗ್ಯವೂ ಕೆಡುವ ಸಂಭವವಿದೆ. ವ್ಯಾಪಾರಸ್ಥರಿಗೆ ಅನಕೂಲ ಉಂಟು.

**ಧನು**:— ನಿಮ್ಮ ದುರ್ದಿನಗಳು ದೂರಾದಾವು ಉದ್ಯೋಗದಲ್ಲಿ ನಿರೀಕ್ಷಿತ ಫಲವು ಲಭಿಸುವುದು. ಆರ್ಥಿಕ ಬಿಕ್ಕಟು ನಡಿಯಲಾಗುವದು. ಮನಸ್ಸಿಗೆ ನೆಮ್ಮದಿ ಲಭಿಸುವದಾಗಿದೆ. ಅನಿರೀಕ್ಷಿತ ಪ್ರವಾಸ ಯೋಗವಿದೆ.

**ಮಕರಃ**— ನಿಮಗೆ ಈ ಮಾಸದಲ್ಲಿ ನಿಮ್ಮ ಕಾರ್ಯಗಳೆಲ್ಲ ಎಂದಿನಂತೆಯೇ ಮುಂದುವರಿದರೂ ಮನೆಯಲ್ಲಿ ಮಕ್ಕಳು ಆರೋಗ್ಯ ಪಾಲನೆಗಾಗಿ ಧನವ್ಯಯಸಾಗಬಹುದು, ನೌಕರಿ ಮತ್ತು ವಾಪಾರಸ್ಥರಿಗೆ ನಿರೀಕ್ಷಿತ ಫಲವು ದೊರೆಯುವದು.

**ಕುಂಭಃ**— ನಿಮ್ಮ ಬಯಕೆಗಳೆಂದು ನೆರವೇರುವಂತಿಲ್ಲ. ಆದರೂ ಹಣದ ವಿಚಾರದಲ್ಲಿ ಮಾತ್ರ ನೀವು ಚಿಂತಿಸಬೇಕಾಗಿರುವದಿಲ್ಲ. ದುರ್ಜನರ ಸಹಾವಾಸದಿಂದ ಕಷ್ಟನಷ್ಟಗಳು ಲಭಿಸುವದು. ಜನಾಪವಾದಗಳೂ ಪ್ರಾಪ್ತವಾದರೂ ಆಗಬಹುದು

**ಮೀನ**:— ಈ ಮಾಸದಲ್ಲಿ ನಿಮ್ಮ ಬಯಕೆಗಳೆಲ್ಲ ನಿರ್ವಿಘ್ನವಾಗಿ ನೆರವೇರುವವು ನಿಮ್ಮ ಶ್ರಮಕ್ಕೆ ಅಧಿಕವಾದ ಫಲವು ದೊರೆಯುವದಾಗಿದೆ ಆರೋಗ್ಯ ಮತ್ತು ಸ್ಥಿತಿ ಉತ್ತಮ ಆದರೂ ಮಾಸಾಂತ್ಯದಲ್ಲಿ ಖರ್ಚು ಹೆಚ್ಚಾಗುವ ಸಂಭವವಿದೆ.

---

## —— ತೇಜಿ-ಮಂದಿ ——

ಬೆಳ್ಳಿ, ಭಂಗಾರ, ತೊಗರಿ, ಹೆಸರು, ಅಲಸಂದಿ, ಅಗಸಿ, ಸಕ್ಕರಿ, ಬೆಲ್ಲ. ಅಕ್ಕಿ, ಜೋಳ, ಕಡಲೆ, ಇವುಗಳಿಗೆ ತೇಜಿ ಯೋಗವು.

ಎಳ್ಳು, ಎಣ್ಣೆ, ನವಣೆ, ಹತ್ತಿ, ಅರಳೆ, ತುಪ್ಪ, ಗುರೆಳ್ಳು, ಮಂದಿ ಯೋಗವು

## ಸಹಾಯಕರು

| | | ರೂಪಾಯಿ |
|---|---|---|
| ೧. | ಶ್ರೀ ಎಸ್. ಕೆ. ಎಡವಣ್ಣನವರು ಧವಳಗಿ | ೧೦—೦೦ |
| ೨. | ,, ಶಂಕರಪ್ಪ ಕಾಳಗಿ ಕ್ಲರ್ಕ ತಾಲೂಕಾ ಅಭಿವೃದ್ಧಿ ಮಂಡಳ ಶಹಪುರ | ೧೦—೦೦ |
| ೩. | ಶ್ರೀ ವಿಠಲಾಚಾರ್ಯ ಓಂಕಾರ P.W.D ಆಫೀಸ ಚಿಂಚೋಳಿ | ೧೦—೦೦ |

ಇವರಿಗೆ ನಮ್ಮ ಧನ್ಯವಾದಗಳು.

## ವಾಚಕರಲ್ಲಿ ಅರಿಕೆ

ಮುಂದಿನ ಸಂಚಿಕೆಯಿಂದ 'ಬಾಲಸಂಪನ' ಎಂಬ ಭಾಗವನ್ನು ಆರಂಭಿಸಿ ಅದರಲ್ಲಿ ಮಕ್ಕಳಿಗೆ ಉಪಯುಕ್ತವಾದ ಸಾಹಿತ್ಯ ಮತ್ತು ಮಕ್ಕಳಿಂದಲೇ ಬರೆಸಿದ ಕತೆ-ಕವನ ಲೇಖನ ಮುಂತಾದುವನ್ನೂ ಪ್ರಕಟಿಸಲಾಗುವುದು. ಲೇಖಕರು ಮಕ್ಕಳಿಗಾಗಿ ರಚಿತವಾದ ತಮ್ಮ ಲೇಖನಗಳನ್ನು ಅವಶ್ಯ ಕಳಿಸಬೇಕು. ಸೂಕ್ತವಾದವುಗಳಿಗೆ ಎಡೆಗೊಡಲಾಗುವುದು.

ಸಂಪಾದಕ

## ಸಾದರ ಸ್ವೀಕಾರ

XXXXXXXXXX

೧. ಸುರಪುರದ ಶ್ರೀ ಆನಂದದಾಸರ ಕೃತಿಗಳು ಸಂಗ್ರಾಹಕರು. ಶ್ರೀಗಳಾದ ದಾಸಾಚಾರ್ಯ ಶಂಗೋಡ, ರಾಜಗೋಪಾಲಾಚಾರ್ಯ ಕನಕಗಿರಿ ಪ್ರಕಾಶಕರು:- ಶ್ರೀ ಗುರುರಾಜ ಭಜನ ಮಂಡಲ ಸುರಪುರ ಬೆಲೆ ೦೦–೭೫ ಪೈಸೆ

೨. ಭವಿಷ್ಯದಬಾಳು ಅಥವಾ ಡೈವಲೀಲೆ ಲೇಖಕರು:- ಶ್ರೀ ನಾಗಪ್ಪ ಶಾಂತವೀರಪ್ಪ ಶೆಟ್ಟರ ನೃಪತುಂಗ ನಿಲಯ ಶಹಪುರ

ಪ್ರಕಾಶಕರು ಶ್ರೀ ಚರಬಸವೇಶ್ವರ ಗ್ರಂಥಭಂಡಾರ ಶಹಪುರ-ಜಿ. ಗುಲಬರ್ಗಾ ಬೆಲೆ ೨ ರೂಪಾಯಿ

# ಮಂದಾಕಿನಿ



---

ಈ ಪತ್ರಿಕೆಯು ಜಿ.ಎಂ. ಗುರುಸಿದ್ಧಶಾಸ್ತ್ರಿ (ಕಾವ್ಯತೀರ್ಥ) ರಾಮಗಿರಿ ಹಿರೇಮಠ ಅವ
ರಿಂದ ಸಂಪಾದಿಸಲ್ಪಟ್ಟು ಜಿ. ಎಂ. ಗುರುಬಸವಾರ್ಯ ಇವರಿಂದ ಶಹಪುರ
ಮಂದಾಕಿನಿ ಕಾರ್‍ಯಾಲಯದಲ್ಲಿ ಪ್ರಕಾಶಿಸಲ್ಪಟ್ಟಿತು.